ಶ್ರೀ ಗುರುಭ್ಯೋ ನಮಃ

# "ಆತ್ಮಾನುಭ ದರ್ಶಿನೀ"

( ಕನ್ನಡ ಭಾವಾನುವಾದ ಮತ್ತು ವಿವರಣೆ )

## ದ್ವಿತೀಯೋಽಧ್ಯಾಯ:

( ಅಧಿಕಾರೀ ಲಕ್ಷಣ ನಿರೂಪಣೆ )

( ಓವಿ ಸಂ.1 - 186)

### ಶ್ರೀ ಸ್ವಯಂಪ್ರಕಾಶಾಯ ನಮಃ

**ಓವೀ ಸಂಖ್ಯೆ 1 :** ಶ್ರೀ ಪದ್ಮನಾಭ ತೀರ್ಥರು ( ಶ್ರೀ ಗಳು ) ಮೊದಲು ತಮ್ಮ ಗುರುಗಳಿಗೆ ಜಯ-ಜಯಕಾರವನ್ನು ಮಾಡಿದ್ದಾರೆ. ಅವರ ಗುರುವು ಸಕಲ ಜೀವಿಗಳ ವಿಶ್ರಾಂತಿ ಸ್ಥಾನವಾಗಿರುತ್ತಾನೆ ಮತ್ತು ಆ ಗುರುವಿನ ಮಹಿಮೆಯು ಅಪಾರವಾಗಿದ್ದು, ಅದು ಮಾತಿಗೂ ಹಾಗೂ ಮನಸ್ಸಿಗೂ ನಿಲುಕದೇ ಸಕಲರಿಗೂ ವರ್ಣಿಸಲು ಅಸಾಧ್ಯವಾಗಿರುತ್ತದೆ.

**ವಿವರಣೆ :** ಶ್ರೀಗಳು ಈ ಗ್ರಂಥದ ಕೆಲವೊಂದು ಅಧ್ಯಾಯಗಳ ಪ್ರಾರಂಭದಲ್ಲಿ 'ಶ್ರೀ ಸ್ವಯಂ ಪ್ರಕಾಶಾಯ ನಮಃ' ಎಂದು ತಮ್ಮ ಗುರುಗಳನ್ನು ಸ್ಮರಿಸಿರುವುದು ಕಂಡುಬರುತ್ತದೆ. ಶ್ರೀಗಳು ಪ್ರತಿ ಅಧ್ಯಾಯದಲ್ಲೂ ಬರೆದಿರುವಂತೆ ಈ ಅಧ್ಯಾಯದಲ್ಲೂ ಕೆಲವು ಓವೀಗಳನ್ನು ತಮ್ಮ ಗುರುಗಳಿಗೆ ಮನಃಪೂರ್ವಕವಾಗಿ ಮೀಸಲಿಟ್ಟಿದ್ದಾರೆ. ಅವರು ಗುರುವಿಗೆ ಎರಡು ಸಲ ಜಯಕಾರ ಮಾಡಿದ್ದಾರೆ. ಇದು ಗುರುವಿನ ಆಧ್ಯಾತ್ಮಿಕ ಆದರ್ಶವು ಯಾವುದಿದೆಯೋ ಅದು ಸಾಫಲ್ಯಗೊಳ್ಳಲು ತಾವೂ ಕೂಡ ಪಣತೊಟ್ಟ ನಿದರ್ಶನವೇ ಆಗಿರುತ್ತದೆ ಎಂದು ಇದನ್ನು ತಿಳಿಯಬಹುದು. ಗುರುವಿನ ಸ್ವರೂಪವು ನಿರ್ವಿಕಲ್ಪವಿದ್ದು, ಸರ್ವ ಜೀವಿಗಳು ಜಾಗ್ರತ-ಸ್ವಪ್ನಗಳಲ್ಲಿ ನಿರಂತರ ಕಲ್ಪನೆಗಳಿಂದ ( ವೃತ್ತಿಗಳಿಂದ ) ಆಯಾಸಗೊಂಡು, ಸುಷುಪ್ತಿಯಲ್ಲಿ ಅವು ಪುನಃ ಚೇತನ ಪಡೆಯಲು ಗುರುವನ್ನೇ ಆಶ್ರಯಧಾಮವನ್ನಾಗಿ ಮಾಡಿಕೊಂಡಿವೆ.

ಗುರುವಿನ ಮಹಿಮೆಯು ಅಪಾರವಾಗಿದ್ದು, ಅವನು ನಿರ್ವಿಕಲ್ಪನಾದ್ದರಿಂದ ಅವನನ್ನು ಮಾತಿನಿಂದಾಗಲೀ, ಮನಸ್ಸಿನಿಂದಾಗಲೀ ಅಥವಾ ಬೇರೆ ಯಾವುದೇ ರೀತಿಯಿಂದಾಗಲೀ ವರ್ಣಿಸಲು ಸಾಧ್ಯವಿಲ್ಲ.

**ಓ.ಸಂ.2:** ಗುರುವು ನಿರ್ವಿಕಾರನೂ, ಸಚ್ಚಿದಾನಂದನೂ, ನಿರಾಕಾರನೂ, ಪರಿಪೂರ್ಣನೂ ಮತ್ತು ಪರಾತ್ಪರನೂ ಆಗಿದ್ದು ಅದ್ವಯ ಸ್ವರೂಪದಿಂದ ತಾನೇ ತಾನಾಗಿದ್ದಾನೆ.

**ವಿವರಣೆ :** ವಿಕಾರವಾಗಿ ನಾಶವಾಗುವ ಯಾವುದೇ ಜಡದ ಉಪಾಧಿಯನ್ನು ಹೊಂದಿರದ ಶುದ್ಧ ಚೈತನ್ಯ ಸ್ವರೂಪದ ಆತ್ಮನೇ ಸದ್ಗುರುವಾಗಿರುತ್ತಾನೆ. ಆದುದರಿಂದ ಸದ್ಗುರುವು ನಿರ್ವಿಕಾರನಾಗಿದ್ದಾನೆ. ಅಂದರೆ ನಿರಂತರವಾಗಿ ಬದಲಾಗದೇ ಇರುವವನಾದ್ದರಿಂದ ಅವನು ಸತ್ ಸ್ವರೂಪನು. ಜಡವನ್ನು ತಿಳಿಯುವವನಾಗಿರುವುದರಿಂದ ಮತ್ತು ಜ್ಞಾನಸ್ವರೂಪನೂ ಆಗಿರುವುದರಿಂದ ಅವನು ಚಿತ್ ಸ್ವರೂಪನು. ಸದ್ಗುರುವು 'ಜೀವ' ನ ಸಾಪೇಕ್ಷ ಸುಖ-ದುಃಖಗಳಿಗಿಂತ ಅತೀತನಾಗಿದ್ದು, ಅನಂತ-ಸ್ವರೂಪದವನಾಗಿರುವುದರಿಂದ ನಿರಪೇಕ್ಷ ಆನಂದಸ್ವರೂಪನೂ ಆಗಿದ್ದಾನೆ; ಜಡದಂತೆ ಸಾಕಾರವಲ್ಲದ ನಿರಾಕಾರನೂ ಹೌದು; ಇದ್ದಂತೆ ತೋರುವುದಕ್ಕೆಲ್ಲ ಅಧಿಷ್ಠಾನನಾಗಿರುವುದರಿಂದ ಪರಿಪೂರ್ಣನು; 'ಪರ' ಎಂದರೆ ಶ್ರೇಷ್ಠ. ಇವನು 'ಪರಾತ್ಪರ' ನಿದ್ದಾನೆ, ಅಂದರೆ ಇವನಿಗಿಂತ ಶ್ರೇಷ್ಠರಾಗಿರುವವರು ಯಾರೂ ಇಲ್ಲ. ಇವನು ಇನ್ನೊಂದಿಲ್ಲದ ತಾನೇ ತಾನಾಗಿರುವ ಸತ್ಯ ಸ್ವರೂಪನಾದ ಅದ್ವಯನಾಗಿರುತ್ತಾನೆ.

**ಓ.ಸಂ.3 :** ಸದ್ಗುರುವು ಮಾಯೆಗೆ ಆಧಾರವಾಗಿದ್ದು ಈಶ್ವರನಾಗಿದ್ದಾನೆ. ಆದುದರಿಂದ ಅವನು ಸರ್ವಜ್ಞನೂ, ಸರ್ವಾತ್ಮನೂ, ಸರ್ವಶ್ರೇಷ್ಠನೂ ಮತ್ತು ಸರ್ವ ಶಕ್ತನೂ ಆಗಿರುತ್ತಾನೆ.

**ವಿವರಣೆ :** ಹಿಂದಿನ ಓವೀಯಲ್ಲಿ ಸದ್ಗುರುವನ್ನು ನಿರ್ಗುಣ, ನಿರ್ವಿಶೇಷ, ನಿರ್ವಿಕಲ್ಪ ಹಾಗೂ ಅದ್ವಯಬ್ರಹ್ಮನೆಂದು ತಿಳಿಸಲಾಗಿದೆ. ಈ ಓವೀಯಲ್ಲಿ ಅದೇ ಸದ್ಗುರುವನ್ನು ಸಗುಣನೂ, ಸವಿಶೇಷನೂ ಹಾಗೂ ಸವಿಕಲ್ಪನೂ ಆದ ಈಶ್ವರನೂ ಆಗಿದ್ದಾನೆ ಎಂದು ತಿಳಿಸಲಾಗಿದೆ. ಜಗತ್ತಿಗೆ ಕಾರಣವಾದ ಮಾಯೆಗೆ ಅವನು ಅಧಿಷ್ಠಾನವಾಗಿರುವುದರಿಂದ ಮಾಯೆಯು ಅವನ ಶಕ್ತಿಯಾಗಿರುತ್ತದೆ. ಅಲ್ಲದೇ ಅವನು ಜೀವ-ಜಗತ್ತುಗಳಿಗೂ ಅಧಿಷ್ಠಾನನಾಗಿರುತ್ತಾನೆ ಮತ್ತು ಅವುಗಳ ಸೃಷ್ಟಿ-ಸ್ಥಿತಿ-ಲಯಗಳಿಗೆ ಕಾರಣನಾಗಿರುವುದರಿಂದ ಅವನನ್ನು ಈಶ್ವರನೆಂದೂ

ಕರೆಯುತ್ತಾರೆ. ಮಾಯೆಯ ಕಾರ್ಯವಾದ ಮಹತ್ ತತ್ತ್ವದ (ಸಮಷ್ಟಿ ಬುದ್ಧಿ) ಉಪಾಧಿಯಿಂದ ಅವನು ಎಲ್ಲವನ್ನೂ ತಿಳಿಯಬಲ್ಲ ಸರ್ವಜ್ಞನಾಗಿದ್ದಾನೆ. ಮಾಯೆಯ ಸತ್ವಾದಿ ತ್ರಿಗುಣಗಳಿಗೆ ಒಡೆಯನಾಗಿರುವುದರಿಂದ ಅವನು ಅನಂತಗುಣಗಣ ಪರಿಪೂರ್ಣನಾಗಿದ್ದಾನೆ. ಆದುದರಿಂದ ಅವನನ್ನು ಸರ್ವಶ್ರೇಷ್ಠನೆಂದೂ ಮತ್ತು ಸರ್ವಶಕ್ತನೆಂದೂ ಕರೆಯುತ್ತಾರೆ. ಅಸ್ತಿ-ಭಾತಿ-ಪ್ರಿಯ ಸ್ವರೂಪದಿಂದ ಸಕಲಕ್ಕೂ ಅಧಿಷ್ಠಾನನಾಗಿರುವುದರಿಂದ ಅವನು ಸರ್ವಾತ್ಮನಾಗಿದ್ದಾನೆ.

**ಓ.ಸಂ.4 :** ಆ ಸದ್ಗುರುವೇ ತನ್ನ ಮಾಯಾಯೋಗದಿಂದ ಸಕಲ 'ಜೀವ' ರ ರೂಪದಲ್ಲಿರುತ್ತಾನೆ. ಅವನಿಗಿಂತ ಬೇರೆಯಾಗಿ ಯಾವುದೂ ಇರುವುದಿಲ್ಲ.

**ವಿವರಣೆ :** ಹಿಂದಿನ ಎರಡು ಓವೀಗಳಲ್ಲಿ ಪರಬ್ರಹ್ಮ ಸ್ವರೂಪನೇ ಆದ ಸದ್ಗುರುವು ಸಗುಣನೂ ಹೌದು ಮತ್ತು ನಿರ್ಗುಣನೂ ಹೌದು ಎಂದು ತಿಳಿಸಲಾಗಿದೆ. 'ಸಗುಣ ಬ್ರಹ್ಮನಾದ ಈಶ್ವರನು 'ಜೀವ'ರುಗಳ ಅಂತಃಕರಣಗಳನ್ನು ಸೃಷ್ಟಿಮಾಡಿ ತಾನೇ ಅವುಗಳಲ್ಲಿ ಪ್ರವೇಶ ಮಾಡಿ 'ಜೀವ' ರುಗಳಾದನು ಎಂದು ಶ್ರುತಿ ವಾಕ್ಯವಿದೆ ( "ತತ್ ಸೃಷ್ಟ್ವಾ ತದೇವಾನು ಪ್ರಾವಿಷತ್", "ಸಚ್ಚತ್ಯಚ್ಚಾಭವತ್" ). ಈ ಪ್ರಕಾರ ಈಶ್ವರನ ಸ್ವರೂಪವೇ ಆಗಿರುವ ಸದ್ಗುರುವು ತನ್ನ ಶಕ್ತಿಯಾದ ಮಾಯೆಯ ಯೋಗದಿಂದ ಅನಾದಿಕಾಲದಿಂದ 'ಜೀವ'ರ ಅಂತಃಕರಣಗಳನ್ನು ಸೃಷ್ಟಿಮಾಡಿ ಅವುಗಳಲ್ಲಿ ಪ್ರವೇಶ ಮಾಡಿ ತಾನೇ ಸ್ವತಃ 'ಜೀವ'ರಾಗಿರುತ್ತಾನೆ. ಹಾಗೆಯೇ ತನ್ನ ಮಾಯಾಶಕ್ತಿಯಿಂದ ಪಂಚಭೂತಾತ್ಮಕವಾದ ಹಾಗೂ ತ್ರಿಗುಣಾತ್ಮಕವಾದ ಈ ವೈವಿಧ್ಯಮಯವಾದ ಜಗತ್ತನ್ನು ಸದ್ಗುರುವೇ ಸೃಷ್ಟಿಮಾಡಿದ್ದಾನೆ. ಹೀಗಾಗಿ ಅವನೇ ಎಲ್ಲದರಲ್ಲೂ ಇರುವವನಾದ್ದರಿಂದ ಅವನನ್ನು ಬಿಟ್ಟು ಬೇರೆ ಯಾವುದಕ್ಕೂ ಅಸ್ತಿತ್ವವಿರುವುದಿಲ್ಲ.

**ಓ.ಸಂ.5 :** ಹಿಂದೆ ಆಗಿದ್ದು, ಈಗ ಆಗುತ್ತಿರುವುದು ಹಾಗೂ ಮುಂದೆ ಆಗುವುದು – ಈ ಎಲ್ಲವೂ ಸದ್ಗುರುವೇ ಇದ್ದಾನೆ. ಇಂತಹ ಸದ್ಗುರುವಾದ "ನಿನಗೆ ನನ್ನ ನಮಸ್ಕಾರವು" ಎಂದು ಶ್ರೀಗಳು ತಮ್ಮ ಸದ್ಗುರುವಿನ ಸ್ವರೂಪಕ್ಕೆ ನಮಿಸಿದ್ದಾರೆ.

**ವಿವರಣೆ :** ಸದ್ಗುರುವಿನ ಸ್ವರೂಪವು ಜಗತ್ತಿಗೆ ಅಂತರ್ಯಾಮಿಯಾದ ಈಶ್ವರನೇ ಆಗಿರುತ್ತಾನೆ. ಅವನು ಮಹಾಕಾಲನಾಗಿ ಕಾಲಕ್ಕೂ ಅಸ್ತಿತ್ವವನ್ನು ಕೊಡುತ್ತಾನೆ. ಆದುದರಿಂದ ಕಾಲದ ಮಿತಿಯಲ್ಲಿ ನಡೆಯುವ ಸಕಲ ಘಟನೆಗಳಿಗೂ ಅವನೇ ಅಧಿಷ್ಠಾನನಾಗಿದ್ದಾನೆ.

ತ್ರಿಕಾಲದಲ್ಲಿ ನಡೆಯುವ ಘಟನೆಗಳು ಅಂದರೆ ಭೂತಕಾಲದಲ್ಲಿ ನಡೆದಿರುವ ಮತ್ತು ವರ್ತಮಾನದಲ್ಲಿ ನಡೆಯುತ್ತಿರುವ ಹಾಗೂ ಭವಿಷ್ಯದಲ್ಲಿ ನಡೆಯಲಿರುವ ಸಕಲ ಕ್ರಿಯೆಗಳೂ ಸದ್ಗುರುವೇ ಆಗಿರುತ್ತಾನೆ. ಇಂತಹ ಮಹಿಮಾನ್ವಿತನಾದ ಸದ್ಗುರುವಿಗೆ ಶ್ರೀಗಳು "ನಿನಗೆ ನನ್ನ ನಮಸ್ಕಾರವು" ಎಂದಿದ್ದಾರೆ. ಈ ರೀತಿ ಹೇಳಿದ ನಮಸ್ಕಾರದ ಬಗ್ಗೆಯೇ ಮುಂದಿನ ಓವೀಗಳಲ್ಲಿ ಶ್ರೀಗಳು ತಮ್ಮದೇ ಆದ ರೀತಿಯಲ್ಲಿ ವಿಶ್ಲೇಷಣೆ ಮಾಡಿದ್ದಾರೆ.

**ಓ.ಸಂ.6 :** ಶ್ರೀಗಳ ಪ್ರಕಾರ ಹೀಗೆ ತಮ್ಮ ಸದ್ಗುರುವಿಗೆ ನಮಸ್ಕರಿಸುವ ಬಯಕೆಯಾಗಿ 'ನೀನು' ಮತ್ತು 'ನಾನು' ಎಂಬ ಶಬ್ದಗಳನ್ನು ಬಳಸಿದರೂ ಅವುಗಳಲ್ಲಿ ಇರುವುದೆಲ್ಲವೂ 'ನೀನು' ಮಾತ್ರ ಆಗಿರುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ಶ್ರೀಗಳು ತಮ್ಮ ಸದ್ಗುರುವಿಗೆ "ನಿನಗೆ ನನ್ನ ನಮಸ್ಕಾರವು" ಎಂದು ಹೇಳಿದ ವಾಕ್ಯದಲ್ಲಿ 'ನೀನು' ಮತ್ತು 'ನಾನು' ಎಂಬ ಅಂದರೆ 'ಸದ್ಗುರುವಿಗೂ' ಮತ್ತು 'ಶ್ರೀಗಳಿಗೂ' ಪ್ರಸ್ತಾಪವಿರುತ್ತದೆ. ಶ್ರೀಗಳ ಅಭಿಪ್ರಾಯದಲ್ಲಿ ಸರ್ವವ್ಯಾಪಕನಾದ ಸದ್ಗುರುವು ( 'ನೀನು' ) ಶ್ರೀಗಳನ್ನೂ ( ತಮ್ಮನ್ನೂ ) ವ್ಯಾಪಿಸಿರುವುದರಿಂದ ಇರುವುದೆಲ್ಲವೂ ಸದ್ಗುರುವೇ ಆಗಿರುತ್ತಾನೆ. ಶ್ರೀಗಳಿಗೆ ಇಲ್ಲಿ ಪ್ರತ್ಯೇಕವಾದ (ವೈಯಕ್ತಿಕವಾದ) ಅಸ್ತಿತ್ವವೇ ಉಳಿಯುವುದಿಲ್ಲ. ಮಾಯಾ ಯೋಗದಿಂದ ಇರುವುದೆಲ್ಲವೂ ಸದ್ಗುರುವೇ ಆಗಿದ್ದಾನೆಂದು ಹಿಂದಿನ ಓವೀಯಲ್ಲಿ ( ಓ.ಸಂ.4 ) ತಿಳಿಸಲಾಗಿದೆ. ಆ ಪ್ರಕಾರ ಈ ಓವೀಯಲ್ಲಿ 'ನಾನಿಲ್ಲದೇ' 'ನೀನು' ಮಾತ್ರ ಇರುವಿ ಎಂದು ತಿಳಿಸಲಾಗಿದೆ.

**ಓ.ಸಂ.7 :** ಉತ್ಪತ್ತಿ ಪೂರ್ವದಲ್ಲಿ ಇರದ ಶಬ್ದಕ್ಕೆ ಅಸ್ತಿತ್ವವಿದೆ ಎಂದು ಹೇಳಲು ಬರುವುದಿಲ್ಲ. ಆದರೆ ಅದರಿಂದ ಸೂಚಿತವಾದ ಅಸ್ತಿತ್ವವು ಸದ್ಗುರುವಿನದೇ ಆಗಿರುತ್ತದೆ.

**ವಿವರಣೆ :** ಯಾವುದೇ ಶಬ್ದವು ವ್ಯಕ್ತಿಯಿಂದ ಉಚ್ಚಾರಣೆಯಾಗಬೇಕಾಗಿರುತ್ತದೆ. ಅದು ಉಚ್ಚಾರಣೆಗೊಳ್ಳುವ ಪೂರ್ವದಲ್ಲಿ ಅದು ಹುಟ್ಟಿರುವುದಿಲ್ಲ. ಹಾಗೆಯೇ ಉಚ್ಚಾರಣೆಗೊಂಡ ನಂತರವೂ ಅದು ಇರುವುದಿಲ್ಲ. ಅಂತಹ ಶಬ್ದವು ಉಚ್ಚಾರಣೆಗೊಳ್ಳುತ್ತಿರುವಾಗ 'ಅಸ್ತಿತ್ವವನ್ನು ಹೊಂದಿದೆ' ಎಂದು ಹೇಳಲು ಬರುವುದಿಲ್ಲ. ಇಲ್ಲಿ ಸಾಮಾನ್ಯವಾಗಿ 'ಶಬ್ದ' ಎಂಬ ಪದವು ಯಾವುದೇ ಶಬ್ದಕ್ಕೆ ಅನ್ವಯಿಸಿದರೂ ಕೂಡ ಪ್ರಸ್ತುತದಲ್ಲಿ ಅದು ಅನ್ವಯಿಸಬೇಕಾಗಿರುವುದು

'ನಾನು' ಮತ್ತು 'ನೀನು' ಪದಗಳಿಗೆ ಮಾತ್ರ. ಈ ಶಬ್ದಗಳಿಗೆ ಅಸ್ತಿತ್ವವಿರುವುದಿಲ್ಲವೆಂದು ಈ ಓವೀಯಲ್ಲಿ ತಿಳಿಸಲಾಗಿದೆ. ಆದರೆ ಈ ಶಬ್ದಗಳಿಂದ ಸೂಚಿತವಾದ ಅಸ್ತಿತ್ವವು ಮಾತ್ರ ಸದ್ಗುರುವಿನದೇ ಇರುತ್ತದೆ. ಏಕೆಂದರೆ ಸದ್ಗುರುವಿಗೆ ಮಾತ್ರ ಅಸ್ತಿತ್ವವಿದ್ದು ಅವನು ಎಲ್ಲದರ ಅಧಿಷ್ಠಾನನಾಗಿದ್ದಾನೆ.

**ಓ.ಸಂ.8 :** ಆದುದರಿಂದ 'ನಾನು' ಮತ್ತು 'ನೀನು' ಎಂಬ ಎರಡು ಶಬ್ದಗಳು ಒಂದೇ ಚೈತನ್ಯದಿಂದ ಹುಟ್ಟಿ ಬರುತ್ತವೆ. ಅವುಗಳಲ್ಲಿರುವ ಚೈತನ್ಯವು ಒಂದೇ ಆಗಿರುತ್ತದೆ.

**ವಿವರಣೆ :** ಶಬ್ದಾರ್ಥವು ಅರಿವಿನ ರೂಪದಲ್ಲಿರುವುದರಿಂದ ಈ ಅರಿವಿನಿಂದಲೇ ಮನೋವೃತ್ತಿಯೂ ಹಾಗೂ ಅದಕ್ಕನುಗುಣವಾದ ಶಬ್ದವೂ ಉತ್ಪತ್ತಿಯಾಗುತ್ತವೆ. ಹೀಗೆ ಚೈತನ್ಯದಿಂದಲೇ 'ನಾನು' ಮತ್ತು 'ನೀನು' ಎಂಬ ಶಬ್ದಗಳು ಉತ್ಪತ್ತಿಯಾಗುತ್ತವೆ. ಆದರೆ 'ನಾನು' ಹಾಗೂ 'ನೀನು' ಶಬ್ದಗಳು ಬೇರೆ ಬೇರೆ ಚೈತನ್ಯಗಳಿಂದ ಉತ್ಪತ್ತಿಯಾಗುವುದಿಲ್ಲ. ಏಕೆಂದರೆ ಚೈತನ್ಯದಲ್ಲಿ ಅನೇಕತ್ವವು ಇರಲು ಸಾಧ್ಯವಿಲ್ಲ. ಅನೇಕತ್ವವು ಜಡದ ಸಂಕೇತವಾಗಿದೆ. ಅನೇಕತ್ವವನ್ನು ತಿಳಿಯುವುದೇ ಈ ಚೈತನ್ಯವಾಗಿರುತ್ತದೆ.

ಜಡ ಅಂತಃಕರಣದ ಉಪಾಧಿಯಲ್ಲಿ ಈ ಚೈತನ್ಯವು ಪ್ರಕಟವಾಗುವುದರಿಂದ ಅನೇಕ ಅಂತಃಕರಣಗಳಿಗೆ ಒಂದೊಂದು ಚೈತನ್ಯವಿರುವುದೆಂಬ ತಪ್ಪು ತಿಳುವಳಿಕೆ ಬಂದು ಅದರಿಂದ ಅನೇಕ 'ಜೀವ'ರಿರುವರೆಂದು ನಂಬುವಂತಾಗಿರುತ್ತದೆ. ಆದುದರಿಂದ 'ನಾನು' ಮತ್ತು 'ನೀನು' ಶಬ್ದಗಳು ವ್ಯಾವಹಾರಿಕವಾಗಿ ಭಿನ್ನ ವ್ಯಕ್ತಿಗಳನ್ನು ಸೂಚಿಸಿದರೂ ನಿಜವಾಗಿ ಒಂದೇ ಚೈತನ್ಯದಿಂದ ಉತ್ಪನ್ನವಾಗಿರುತ್ತವೆ.

**ಓ.ಸಂ.9 :** ಆದುದರಿಂದ 'ನಾನು' ಮತ್ತು 'ನೀನು' ಗಳಲ್ಲಿ ಸರ್ವವ್ಯಾಪಕನಾದ 'ನೀನು' ಮಾತ್ರ ಇರುತ್ತದೆ. ಹೀಗಿದ್ದಾಗ 'ನನ್ನ' ನಮಸ್ಕಾರ ಕ್ರಿಯೆಯು ಪ್ರತ್ಯೇಕವಾಗಿ ಇರಲು ಸಾಧ್ಯವಿಲ್ಲ.

**ವಿವರಣೆ :** ಶಿಷ್ಯನು ಹಾಗೂ ಅವನ ಸದ್ಗುರುಗಳನ್ನು ಸೂಚಿಸುವ 'ನಾನು' ಮತ್ತು 'ನೀನು' ಶಬ್ದಗಳು ಒಂದೇ ಚೈತನ್ಯದಿಂದ ಉತ್ಪತ್ತಿಯಾಗುತ್ತವೆ ಎಂದು ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. 'ಈ ಒಂದೇ ಸರ್ವ ವ್ಯಾಪಕವಾದ ಚೈತನ್ಯವು ತಾನೇ ಇದ್ದೇನೆ' ಎಂದು ಸದ್ಗುರುವು ತಿಳಿದಿರುವುದರಿಂದಲೂ ಮತ್ತು 'ಸಕಲಕ್ಕೂ ತಾನೇ ಅಸ್ತಿತ್ವವನ್ನು ಕೊಡುವ ಅಧಿಷ್ಠಾನನಾಗಿದ್ದೇನೆ' ಎಂದು ಕೂಡ ಅವನು ತಿಳಿದಿರುವುದರಿಂದಲೂ ಅವನು ಮಾತ್ರ ಇರುತ್ತಾನೆ. ಅಂದರೆ 'ನಾನು' ಮತ್ತು 'ನೀನು' ಗಳಲ್ಲಿ 'ನೀನು'

ಮಾತ್ರ ಇರುತ್ತದೆ. ಹೀಗಿದ್ದಾಗ 'ನಾನು', 'ನಿನಗೆ' ಮಾಡುವ ನಮಸ್ಕಾರವು ಹೇಗೆ ಪ್ರತ್ಯೇಕವಾಗಿ ಇರಲು ಸಾಧ್ಯವಿದೆ ? ಅಂದರೆ ಶ್ರೀಗಳು ತಮ್ಮ ಸದ್ಗುರುವಿಗೆ ಸಲ್ಲಿಸಿರುವ ನಮಸ್ಕಾರವು ಪ್ರತ್ಯೇಕವಾಗಿ ಇರಲು ಸಾಧ್ಯವಿಲ್ಲ ಎಂದು ತಿಳಿಸಿದ್ದಾರೆ.

**ಓ.ಸಂ.10 :** ಈ ರೀತಿ ಶ್ರೀಗಳು ತಮ್ಮ ಸದ್ಗುರುವಿಗೆ ಕ್ರಿಯೆಯೇ ಅಲ್ಲದ ನಮಸ್ಕಾರವನ್ನು ಮಾಡಿದ್ದಾರೆ. ಇನ್ನು ತಮ್ಮ ಶ್ರೋತಾನಿಗೆ ಅಧಿಕಾರೀ ಲಕ್ಷಣಗಳನ್ನು ಹೇಳಲು ಪ್ರಾರಂಭಿಸುತ್ತಾರೆ.

**ವಿವರಣೆ :** ಸದ್ಗುರುವು ಪರಬ್ರಹ್ಮಸ್ವರೂಪನಾಗಿರುವುದರಿಂದ ಅವನು ಅದ್ವಯನೂ, ಅವಿಕಾರಿಯೂ ಹಾಗೂ ಚೈತನ್ಯಸ್ವರೂಪನೂ ಆಗಿರುತ್ತಾನೆ. ಸದ್ಗುರುವಿದ್ದಲ್ಲಿ ಶಿಷ್ಯನಾಗಲೀ ಬೇರೆ ಇನ್ನಾವುದಕ್ಕೇ ಆಗಲೀ ಅಸ್ತಿತ್ವವಿಲ್ಲ. ಏಕೆಂದರೆ ಇವನು ಅದ್ವಯನು. ನಿಷ್ಕ್ರಿಯನಾದ ಇವನಲ್ಲಿ ಕ್ರಿಯಾರೂಪವಾಗಿರುವ ನಮಸ್ಕಾರವು ಸಾಧ್ಯವಿಲ್ಲ. ಶಿಷ್ಯನಿಗೆ ಪ್ರತ್ಯೇಕವಾದ ಅಸ್ತಿತ್ವವೇ ಇಲ್ಲದಾಗ ಅವನಾದರೂ ನಮಸ್ಕಾರವನ್ನು ತನ್ನ ಗುರುವಿಗೆ ಮಾಡಲು ಸಾಧ್ಯವಿಲ್ಲ. ಇಲ್ಲಿ ಶಿಷ್ಯನ ಬ್ರಹ್ಮಾತ್ಮೈಕ್ಯ ಜ್ಞಾನವು ಪರಿಪೂರ್ಣವಾಗಿದ್ದು ತಾನು ಸಂಪೂರ್ಣವಾಗಿ ಸದ್ಗುರುವಿನಲ್ಲಿ ಒಂದಾಗಿದ್ದಾನೆ. ತನ್ನ ಹಾಗೂ ತನ್ನ ಗುರುವಿನ ಮಧ್ಯೆ ಇರುವ ತನ್ನ ಮನಸ್ಸೆಂಬ ಗೋಡೆಯನ್ನು ತೆಗೆದುಹಾಕಿ ಅಮನಸ್ಕನಾಗಿದ್ದಾನೆ. ಹೀಗೆ ಮನವಿಲ್ಲದೇ 'ನಮನ'ವನ್ನು ಮಾಡಿದ್ದಾನೆ. ಇದೇ ಕ್ರಿಯೆಯಲ್ಲದ ನಮಸ್ಕಾರವು. ಇನ್ನು ಮೇಲೆ ಶ್ರೋತಾನಿಗೆ ಶ್ರೀಗಳು ಅಧಿಕಾರೀ ಲಕ್ಷಣಗಳನ್ನು ಹೇಳುತ್ತಾರೆ.

**ಓ.ಸಂ.11 :** ಶ್ರೋತಾನು ( ಶಿಷ್ಯನು ) ಸದ್ಗುರುವಿಗೆ ವಂದಿಸಿ ತನ್ನ ಧನ್ಯತಾ ಭಾವವನ್ನು ಪರಿಪರಿಯಾಗಿ ಪ್ರಕಟಿಸುತ್ತಾನೆ. ಗುರುವು ತನಗೆ ಬೋಧಿಸುವ ಆ ದಿನವೇ ಧನ್ಯವಾಗಿದೆ. ತನ್ನ ಹಿಂದಿನ ಪೂರ್ವ ಪುಣ್ಯವೂ ಧನ್ಯವಾಗಿರುತ್ತದೆ. ತಾನೂ ಧನ್ಯನಾಗಿದ್ದಾನೆ.

**ವಿವರಣೆ :** ಹಿಂದಿನ ಓವೀಯಲ್ಲಿ, ಶ್ರೀಗುರುವು ಕೇಳುವ ಶಿಷ್ಯನಿಗೆ ಅಧಿಕಾರೀ ಲಕ್ಷಣಗಳನ್ನು ಹೇಳುವೆನು ಎಂದು ನುಡಿದಾಗ, ಶಿಷ್ಯನಿಗೆ ತನ್ನ ಗುರುವು ತನಗೆ ಬೋಧಿಸುವ ಕ್ಷಣ ಬಂದಿತೆಂದು ಆನಂದಾತಿರೇಕದಿಂದ ತನ್ನ ಧನ್ಯತೆಯನ್ನು ಮುಂದಿನ ಅನೇಕ ಓವೀಗಳಲ್ಲಿ ಹೇಳುತ್ತಾನೆ. ತನ್ನ ಜೀವಮಾನದಲ್ಲಿ ಶ್ರೀ ಗುರುವು ಬೋಧಿಸಲು ಪ್ರಾರಂಭಿಸಿದ ಆ ಸುದಿನವೇ ಧನ್ಯವಾಗಿದೆ. ಏಕೆಂದರೆ ಆ ದಿನವನ್ನು ತಾನು ಎಂದೂ ಮರೆಯುವಂತಿಲ್ಲ. ಹಾಗೆಯೇ ತಾನು ಆ ವರೆಗೆ ಗಳಿಸಿದ ಪೂರ್ವ ಪುಣ್ಯ ರಾಶಿಯು ಸಫಲವಾಗಿದ್ದು ಅದು ಸಾರ್ಥಕವಾಗಿರುವುದರಿಂದ ಅದೂ ಧನ್ಯವೇ. ಹಾಗೆಯೇ ಅಪರೂಪವಾಗಿಯೂ ಹಾಗೂ ಅನಿರೀಕ್ಷಿತವಾಗಿಯೂ ಶ್ರೀ ಗುರು-ಬೋಧೆಯು ತನಗೆ ದೊರಕಿರುವುದಕ್ಕೆ ತಾನೂ ಅತ್ಯಂತ ಧನ್ಯನಾಗಿದ್ದಾನೆ.

**ಓ.ಸಂ.12 :** ಶಿಷ್ಯನು ಮುಂದುವರಿಸುತ್ತ ತನ್ನ ತಂದೆ-ತಾಯಿಯರು ಧನ್ಯರಾಗಿದ್ದಾರೆ ಹಾಗೂ ತನ್ನ ಯಾವ ಕುಲದೇವತೆಯ ಪ್ರಸಾದದಿಂದ ಬೋಧಿಸುವ ಈ ದಿನ ಶ್ರೀ ಗುರುನಾಥನ ದರ್ಶನವಾಯಿತೋ ಆ ಕುಲದೇವತೆಯೂ ಧನ್ಯವಾಗಿದೆ ಎಂದು ಶಿಷ್ಯನು ಹೇಳುತ್ತಿದ್ದಾನೆ.

**ವಿವರಣೆ :** ತಾನು ಯಾವ ತಂದೆ-ತಾಯಿಯರನ್ನು ಬಿಟ್ಟು ಬಂದಿದ್ದಾನೋ ಹಾಗೂ ತನ್ನ ಮಗನ ವಿರಹ ವೇದನೆಯನ್ನು ಯಾವ ತಂದೆ-ತಾಯಿಯರು ಅನುಭವಿಸಿದರೋ ಅದೆಲ್ಲ ಸಾರ್ಥಕವಾಗಿದೆ ಎಂದು ತಿಳಿದು ತಂದೆ-ತಾಯಿಯರು ಧನ್ಯರಾದರೆಂದು ಶಿಷ್ಯನು ಹೇಳುತ್ತಿದ್ದಾನೆ. ಅಲ್ಲದೇ ತನ್ನ ಯಾವ ಕುಲದೇವತೆಯ ಅನುಗ್ರಹ ಪೂರಿತವಾದ ಪ್ರಸಾದದಿಂದ ಈ ಸುದಿನ ತನಗೆ ಶ್ರೀ ಗುರುನಾಥನ ದರ್ಶನವಾಯಿತೋ ಆ ಕುಲದೇವತೆಯೂ ಧನ್ಯವಾಗಿದೆ ಎಂದು ಹೇಳುತ್ತಾನೆ. ಹೀಗೆ ಅನೇಕ ರೀತಿಯಲ್ಲಿ ಶಿಷ್ಯನು ತನ್ನ ಧನ್ಯತಾಭಾವನೆಯನ್ನು ಅಡೆ ತಡೆ ಇಲ್ಲದೇ ಪ್ರಕಟಿಸುತ್ತಿದ್ದಾನೆ. ಅವನ ಈ ಆನಂದಕ್ಕೆ ಕಾರಣವೇನೆಂದರೆ ಅವನಿಗೆ ಶ್ರೀ ಗುರುವು ತನ್ನನ್ನು ಬೋಧಿಸಲಿಕ್ಕೆ ತಕ್ಕವನೆಂದು ಗ್ರಹಿಸಿರುವುದೇ ಆಗಿರುತ್ತದೆ ಮತ್ತು ಶಿಷ್ಯನು ಎಷ್ಟೋ ವರ್ಷಗಳ ಪರ್ಯಂತ ಗುರುಸೇವೆ ಮಾಡಿದಾಗ್ಯೂ ಇಂತಹ ಅವಕಾಶವು ಅವನಿಗೆ ದುರ್ಲಭವಾಗಿರುತ್ತದೆ.

**ಓ.ಸಂ.13 :** ಶಿಷ್ಯನು ಹೇಳುವುದನ್ನು ಮುಂದುವರಿಸುತ್ತಾನೆ. ತನ್ನ ಶರೀರವು ಧನ್ಯವಾಗಿದೆ. ಭಕ್ಷ್ಯ ಭೋಜ್ಯಗಳನ್ನು ಭಕ್ಷಿಸಿದರೂ ತನ್ನ ಈ ಶರೀರವು ಸೊರಗುತ್ತದೆ. ಆದರೆ ಗುರು ಸೇವೆಯಿಂದ ಸಿಗುವ ಗುರು ಪ್ರಸಾದದಿಂದ ಮಾತ್ರ ಅದು ಶಕ್ತಿಶಾಲಿಯಾಗುತ್ತದೆ.

**ವಿವರಣೆ :** ಶಿಷ್ಯನಿಗೆ ತನ್ನ ಶರೀರವು ಕೂಡ ಧನ್ಯವಾಗಿದೆ ಎಂದೆನಿಸಿ ಅದನ್ನೇ ಹೇಳುತ್ತಿದ್ದಾನೆ. ಅವನಿಗೆ ಪ್ರತಿ ಜನ್ಮದಲ್ಲೂ ಒಂದೊಂದರಂತೆ ಈ ವರೆಗೆ ಅನಾದಿ ಕಾಲದಿಂದಲೂ ಅಸಂಖ್ಯಾತ ಶರೀರಗಳು ಬಂದು ಹೋದರೂ ಹಿಂದಿನ ಯಾವ ಶರೀರಗಳಿಗೂ ಗುರುಸೇವೆಯ ಅವಕಾಶವು ಸಿಕ್ಕಿರಲಿಲ್ಲ. ಆದರೆ ವರ್ತಮಾನದ ಈ ಶರೀರಕ್ಕೆ ಮಾತ್ರ ಗುರುಸೇವೆಯ ಅವಕಾಶವು ದೊರಕಿರುವುದು ಹಾಗೂ ಈ ಜನ್ಮದಲ್ಲೇ ಗುರೂಪದೇಶವು ದೊರಕಿರುವುದರಿಂದ ಈ ಶರೀರವು ಧನ್ಯವಾಗಿದೆ ಎನ್ನುತ್ತಿದ್ದಾನೆ. ಪ್ರತಿನಿತ್ಯ ಭಕ್ಷ್ಯ-ಭೋಜ್ಯಗಳ ಸಹಿತ ಮೃಷ್ಟಾನ್ನ ಭೋಜನ ಮಾಡಿದರೂ ಅದು ಸೊರಗುವುದು ತಪ್ಪುವುದಿಲ್ಲ. ಆದುದರಿಂದ ಗುರುಸೇವೆಯಿಂದ

ಸಿಗುವ ಪ್ರಸಾದದಿಂದ ಮಾತ್ರ ತನ್ನ ಶರೀರವು ಶಕ್ತಿ ಶಾಲಿಯಾಗಿರುತ್ತದೆ ಮತ್ತು ಜ್ಞಾನ ಸಂಪಾದನೆಗೆ ಸಾಮರ್ಥ್ಯವನ್ನು ಪಡೆಯುತ್ತದೆ.

**ಓ.ಸಂ.14 :** ಸ್ಪರ್ಶಮಣಿಯಿಂದ ( ಪರುಷದಿಂದ ) ಸ್ಪರ್ಶ ಮಾಡಿದ ಲೋಹವು ಲೋಹವಾಗಿ ಉಳಿಯುವುದಿಲ್ಲ. ಹಾಗೆಯೇ ರಾಜನು ತನ್ನ ದಾಸಿಯನ್ನು ಮದುವೆಯಾದಾಗ ಅವಳು ದಾಸಿಯಾಗಿ ಉಳಿಯುವುದಿಲ್ಲ.

**ವಿವರಣೆ :** ಸ್ಪರ್ಶಮಣಿಯು ಕಬ್ಬಿಣದ ತುಂಡನ್ನು ಸ್ಪರ್ಶಿಸಿದಾಗ ಆ ಲೋಹದ ತುಂಡು ಬಂಗಾರವಾಗುತ್ತದೆ ಎಂಬ ನಂಬಿಕೆಯು ಪ್ರಚಲಿತವಾಗಿರುತ್ತದೆ ಮತ್ತು ಇದರ ಪ್ರಸ್ತಾಪವು ಅನೇಕ ಶಾಸ್ತ್ರ ಗ್ರಂಥಗಳಲ್ಲಿ ಉಲ್ಲೇಖವಿರುತ್ತದೆ. ಈ ಓವೀಯಲ್ಲಿ ಸದ್ಗುರುವಿನ ಸಂಪರ್ಕ ಬಂದಮೇಲೆ ಶಿಷ್ಯನ ಅಜ್ಞಾನವು ನಾಶವಾಗುತ್ತದೆ ಹಾಗೂ ಅವನು 'ಜೀವ'ನಾಗಿ ಉಳಿಯುವುದಿಲ್ಲ ಎಂಬುದನ್ನು ವಿವರಿಸಲು ಎರಡು ಸುಂದರ ಉಪಮಾನಗಳನ್ನು ಕೊಡಲಾಗಿದೆ. ಸ್ಪರ್ಶಮಣಿಯ ಸ್ಪರ್ಶವಾದ ಕಬ್ಬಿಣದ ತುಂಡು ಹೇಗೆ ಕಬ್ಬಿಣವಾಗಿ ಉಳಿಯುವುದಿಲ್ಲವೋ ಹಾಗೆ ಸದ್ಗುರುವಿನ ಸಂಪರ್ಕಕ್ಕೆ ಬಂದ ಶಿಷ್ಯನು ತನ್ನ ಜೀವತ್ವವನ್ನು ಉಳಿಸಿಕೊಳ್ಳುವುದಿಲ್ಲ. ಇದೇ ರೀತಿ ರಾಜನು ಮದುವೆಯಾದ ದಾಸಿಯು ದಾಸಿಯಾಗಿ ಉಳಿಯದೇ ರಾಣಿಯು ಹೇಗೆ ಆಗುತ್ತಾಳೋ ಹಾಗೆ ಶಿಷ್ಯನ ಜೀವತ್ವವು ನಷ್ಟ ಹೊಂದಿ ಅವನಿಗೆ ಬ್ರಹ್ಮತ್ವವು ಬರುವುದು. ಇದೇ ವಿಷಯದ ಬಗ್ಗೆ ಮುಂದಿನ ಓವೀಯಲ್ಲೂ ಇನ್ನೊಂದು ಉಪಮಾನವಿರುತ್ತದೆ.

**ಓ.ಸಂ.15 :** ಹಾಗೆಯೇ ಕುಬೇರನಿಂದ ಅಂಗೀಕರಿಸಲ್ಪಟ್ಟ ಮನುಷ್ಯನಿಗೆ ದಾರಿದ್ರ್ಯವಿರುವುದು ಸಾಧ್ಯವಿಲ್ಲ. ಅದರಂತೆಯೇ ಸದ್ಗುರುವು ತನ್ನನ್ನು ಅಂಗೀಕರಿಸಿದ್ದಾನೆ.

**ವಿವರಣೆ :** ಶಿಷ್ಯನು ತನ್ನ ಆನಂದದ ಭಾವೋದ್ವೇಗದಲ್ಲಿ ತನ್ನ ಮಾತನ್ನು ಮುಂದುವರಿಸುತ್ತಿದ್ದಾನೆ. ಹಿಂದಿನ ಓವೀಯಲ್ಲಿ ಕೊಟ್ಟ ಎರಡು ಉಪಮಾನಗಳಂತೆ ಈ ಓವೀಯಲ್ಲೂ ಮೂರನೆಯ ಉಪಮಾನವನ್ನು ಕೊಟ್ಟು ತನಗೆ ಗುರುಗಳ ಆಶ್ರಯ ಸಿಕ್ಕಿದ್ದಕ್ಕಾಗಿ ತನ್ನ ಆನಂದವನ್ನು ಪ್ರಕಟಮಾಡುತ್ತಿದ್ದಾನೆ. ಉತ್ತರ ದಿಕ್ಕಿನ ದೇವತೆಯಾದ ಕುಬೇರನು ಧನಾಧಿಪತಿಯಾಗಿದ್ದಾನೆ. ಐಶ್ವರ್ಯಕ್ಕೆ ಒಡೆಯನಾಗಿರುವ ಕುಬೇರನ ಆಶ್ರಯವಿದ್ದ ಮನುಷ್ಯನಿಗೆ ದಾರಿದ್ರ್ಯವಿರಲು ಸಾಧ್ಯವಿಲ್ಲ. ಹಾಗೆಯೇ ಸದ್ಗುರುವು ಈ ಶಿಷ್ಯನನ್ನು ಅಂಗೀಕರಿಸಿ ಆಶ್ರಯಕೊಟ್ಟಮೇಲೆ ಅಜ್ಞಾನವು ಉಳಿಯುವಂತಿಲ್ಲ. ಅಂದರೆ ಶಿಷ್ಯನ ಜೀವತ್ವವು ನಾಶವಾಗಿ ಬ್ರಹ್ಮತ್ವವು ಬರುವುದರಲ್ಲಿ ಸಂಶಯವಿಲ್ಲ.

**ಓ.ಸಂ.16 :** ಹೀಗೆ ಸದ್ಗುರುವು ತನ್ನನ್ನು ಅಂಗೀಕರಿಸಿದ ಮೇಲೆ ತನ್ನ ಜೀವತ್ವವು ನಾಶವಾಗುತ್ತದೆ. ತನ್ನಂತಹ ಭಾಗ್ಯವಂತನು ಈ ಜಗತ್ತಿನಲ್ಲಿ ಯಾರೂ ಇರಲು ಸಾಧ್ಯವಿಲ್ಲ ಎನ್ನುವುದು ನಿಶ್ಚಯ.

**ವಿವರಣೆ :** ಶಿಷ್ಯನು ಹೇಳುವುದನ್ನು ಮುಂದುವರಿಸುತ್ತಿದ್ದಾನೆ. ಹಿಂದಿನ ಓವೀಗಳಲ್ಲಿ ತಿಳಿಸಿದಂತೆ ಅವನಿಗೆ ಶ್ರೀಗುರುವಿನ ಅಂಗೀಕಾರ ಸಿಕ್ಕಿರುವುದರಿಂದ ಆತ್ಮವಿಶ್ವಾಸದಿಂದಲೂ ಹಾಗೂ ಆನಂದದಿಂದಲೂ ಈ ಮಾತುಗಳನ್ನಾಡುತ್ತಿದ್ದಾನೆ. ತನಗೆ ಅನಾದಿಕಾಲದಿಂದ ಗಂಟುಬಿದ್ದಿರುವ ಜೀವತ್ವವು ನಾಶವಾಗುವುದರಲ್ಲಿ ಸಂಶಯವಿಲ್ಲ. ಇಂತಹ ಸದವಕಾಶವು ಸಿಕ್ಕಿರುವುದು ಅತ್ಯಂತ ವಿರಳವಾಗಿದ್ದು ತಾನು ಅಂತಹ ಅದೃಷ್ಟನಾಗಿರುವುದರಿಂದ ತನ್ನ ಧನ್ಯತೆಯನ್ನು ಮೇಲಿಂದ ಮೇಲೆ ವ್ಯಕ್ತಮಾಡುತ್ತಿದ್ದಾನೆ. ಭವ-ಬಂಧನವನ್ನು ಬಿಡಿಸಬಲ್ಲ, ಇಡೀ ಬ್ರಹ್ಮಾಂಡದಲ್ಲಿ ಇರುವ ದೇವ-ದಾನವರಿಗೂ ಸಿಗದಿರುವ, ಇಂತಹ ಸದ್ಗುರುವು ತನಗೆ ಸಿಕ್ಕಿರುವುದರಿಂದ ತಾನು ಇಡೀ ಜಗತ್ತಿನಲ್ಲಿ ಅತ್ಯಂತ ಭಾಗ್ಯವಂತನೆಂದು ಹೇಳುತ್ತಿದ್ದಾನೆ.

**ಓ.ಸಂ.17 :** ತನ್ನ ಜನ್ಮ-ಮರಣಕ್ಕೆ ಕಾರಣವಾದ ರಾಗ-ದ್ವೇಷಗಳು ಹಾಗೂ ಅದರ ಪರಿಣಾಮವಾದ ಈ ದ್ವೈತ ಪ್ರಪಂಚವು ಭಸ್ಮವಾಗಲು ತನಗೆ ಶ್ರೀ ಗುರು ಪ್ರಸಾದವೆಂಬ ಅಸ್ತ್ರವೊಂದೇ ಸಾಕು.

**ವಿವರಣೆ :** ತನ್ನವರ ಬಗ್ಗೆ ಅಭಿಮಾನವನ್ನೂ ಹಾಗೂ ಅನುಕಂಪವನ್ನೂ ತೋರುವುದೇ ರಾಗ. ಮನುಷ್ಯನು ಈ ರಾಗದಿಂದ ತನ್ನವರಿಗೆ ಅನುಕೂಲವಾಗುವಂತಹ ಪಾಪ ಕರ್ಮಗಳನ್ನು ಕೂಡ ಮಾಡಲು ಹೇಸುವುದಿಲ್ಲ. ಅದೇ ರೀತಿ ತನಗಾಗದವರಾದ ಶತ್ರುಗಳನ್ನು ಕಂಡರಾಗದೇ ಅವರ ಬಗ್ಗೆ ಕೆಟ್ಟದ್ದನ್ನೇ ಯೋಚಿಸುವುದು ಹಾಗೂ ಕೆಟ್ಟದ್ದನ್ನೇ ಮಾಡುವುದು ಅವರ ಮೇಲಿರುವ ದ್ವೇಷದ ಪರಿಣಾಮವಾಗಿದೆ. ಹೀಗೆ ರಾಗ-ದ್ವೇಷಗಳಿಂದ ಉಂಟಾಗುವ ಪಾಪ-ಕರ್ಮಗಳಿಂದ ಜನ್ಮ-ಮರಣಗಳು ಹಾಗೂ ಭವ-ಬಂಧನವು ಅನಿವಾರ್ಯವಾಗಿರುತ್ತವೆ. ಈ ಬಂಧನದ ಭೋಗಕ್ಕಾಗಿ ದ್ವೈತ ಪ್ರಪಂಚವು ನಮಗೆ ತೋರುತ್ತಿದೆ. ತಾನು ದೇಹವೆಂಬ ಅಜ್ಞಾನವೇ ಈ ರಾಗ-ದ್ವೇಷಗಳಿಗೆ ಕಾರಣವಾಗಿರುತ್ತದೆ. ತನಗೆ ಸಿಗುವ ಈ ಸದ್ಗುರು ಪ್ರಸಾದವೆಂಬ ಬ್ರಹ್ಮಾಸ್ತ್ರದಿಂದ ಈ ಅಜ್ಞಾನವು ತೊಲಗಿ ತನ್ನ ಭವ-ಬಂಧನದ ಜೊತೆಗೆ ಈ ದ್ವೈತ ಪ್ರಪಂಚವು ಕೂಡ ಭಸ್ಮವಾಗಿ ಹೋಗುತ್ತದೆ ಎಂಬ ವಿಶ್ವಾಸವನ್ನು ಶಿಷ್ಯನು ವ್ಯಕ್ತಮಾಡುತ್ತಿದ್ದಾನೆ.

**ಓ.ಸಂ.18 :** ಮುಮುಕ್ಷುವಾದ ತನಗೆ, ಕೃಪಾಘನನಾದ ಹಾಗೂ ಸ್ವತಃ ಪರಬ್ರಹ್ಮನಾಗಿರುವ ಸದ್ಗುರುವು ಕೃಪೆಯಿಂದ ಉಪದೇಶಿಸಲು ಒಪ್ಪಿರುವನು.

**ವಿವರಣೆ :** ಈ ಓವೀಯಲ್ಲಿ ಶಿಷ್ಯನು ತನ್ನ ಗುರುವಿನಿಂದ ಉಪದೇಶ ಪಡೆಯುವಾಗ ಇರುವ ಶಿಷ್ಯನ ಹಾಗೂ ಗುರುವಿನ ಲಕ್ಷಣಗಳನ್ನು ತಿಳಿಸಲಾಗಿದೆ. ಶಿಷ್ಯನು ಭವ-ಬಂಧನದಿಂದ ರೋಸಿ ಹೋಗಿ ಲೌಕಿಕ ಹಾಗೂ ಪಾರ ಲೌಕಿಕ ಸುಖವನ್ನು ಹೇಯ ಬುದ್ಧಿಯಿಂದ ನೋಡಿ ( ವೈರಾಗ್ಯ ) ಈ ಬಂಧನದಿಂದ ಬಿಡಿಸಿಕೊಳ್ಳಲು ( ಮೋಕ್ಷ ) ಅತ್ಯಂತ ಆಗ್ರಹ ಪೂರ್ವಕವಾದ ಮೋಕ್ಷೇಚ್ಛೆಯು ( ಮುಮುಕ್ಷುತ್ವ ) ಅವನಿಗೆ ಇರಬೇಕಾಗುತ್ತದೆ. ಚಾತಕ ಪಕ್ಷಿಯು ಹೇಗೆ ಸ್ವಾತಿ ಮಳೆ ನೀರಿಗಾಗಿ ಕಾಯುತ್ತಿರುವುದೋ ಹಾಗೆ ಗುರುವಿನ ಉಪದೇಶಕ್ಕಾಗಿ ಶಿಷ್ಯನು ಕಾಯುತ್ತಿರುತ್ತಾನೆ. ಹಾಗೆಯೇ ಗುರುವು ಕೂಡ ಅಪರೋಕ್ಷ ಬ್ರಹ್ಮಜ್ಞಾನಿಯೇ ಆಗಿರಬೇಕು. ಹೀಗೆ ಬ್ರಹ್ಮಜ್ಞಾನಿಯಾಗಿರುವ ಗುರುತನ್ನು ಶಾಸ್ತ್ರವು "ಶ್ರೋತ್ರೀಯಂ ಬ್ರಹ್ಮನಿಷ್ಠಮ್" ಎಂದು ಹೇಳಿದೆ. ಅಂದರೆ ಗುರುವು ಶ್ರುತಿ-ಶಾಸ್ತ್ರಗಳನ್ನು ಬಲ್ಲವನಾಗಿರಬೇಕು ಮತ್ತು ಬ್ರಹ್ಮನಿಷ್ಠನಾಗಿರಬೇಕು. ಹೀಗೆ ಸ್ವತಃ ಕೃಪಾಘನನಾದ ಹಾಗೂ ಪರಬ್ರಹ್ಮಸ್ವರೂಪನಿರುವ ಗುರುವೇ ಉಪದೇಶಿಸಬೇಕು. ಇಂತಹ ಗುರುವು ಉಪದೇಶಿಸಲು ಒಪ್ಪಿರುವುದು ಶಿಷ್ಯನಿಗೆ ಆನಂದವನ್ನು ಉಂಟುಮಾಡಿದೆ.

**ಓ.ಸಂ.19 :** ಶಿಷ್ಯನು ಹೀಗೆ ಯೋಚಿಸುತ್ತಾನೆ – ತನಗೆ ಈಗ ಯಾವುದೇ ರೀತಿಯ ಭಯವಿರುವುದಿಲ್ಲ. ಕಾಲದ ಚಕ್ರವನ್ನು ತಾನು ಈಗ ನಾಶ ಪಡಿಸಬಲ್ಲವನಾಗಿದ್ದಾನೆ. ರಾವಣನಂತಿರುವ ಅಹಂಕಾರ ಸಹಿತವಾದ ಹಾಗೂ ಅನುಚರರಂತಿರುವ ಉಳಿದ ಅಂತಃಕರಣಾದಿಗಳನ್ನು ತನ್ನ ಗುಲಾಮನನ್ನಾಗಿ ಮಾಡಿಕೊಂಡಿದ್ದಾನೆ.

**ವಿವರಣೆ :** ತನ್ನ ಗುರುವಿನ ಸಹವಾಸದಿಂದ ಶಿಷ್ಯನಾದ ತನಗೆ ಯಾವುದೇ ಭಯವಿರುವುದಿಲ್ಲ. ಕಾಲದ ಸರಪಳಿಯನ್ನೇ ಅವನು ಈಗ ತುಂಡರಿಸಬಲ್ಲವನಾಗಿದ್ದಾನೆ. ಅಂದರೆ ಅನಾದಿಕಾಲದಿಂದ ತಾನು ಹುಟ್ಟು ಸಾವುಗಳನ್ನು ಪಡೆಯುತ್ತಿದ್ದು ಈ ಜನ್ಮಕ್ಕೇ ಅವನಿಗೆ ಈ ಕಾಲದ ನಾಶವಾಗಿ ಅದು ಮುಂದಿನ ಭವಿಷ್ಯತ್ತಿನಲ್ಲಿ ಯಾವುದೇ ರೀತಿಯಲ್ಲಿ ಜನ್ಮ-ಮರಣಗಳ ರೂಪದಲ್ಲಿ ಅದು ಪುನಃ ಹುಟ್ಟು ಪಡೆಯದಂತೆ ಮಾಡಲು ಅವನು ಸಮರ್ಥನಿದ್ದಾನೆ. ಅಂದರೆ ಗುರುವಿನ ಅನುಗ್ರಹದಿಂದ ತನ್ನ ಅಜ್ಞಾನವು ನಾಶವಾಗಿ ಜನ್ಮ-ಮರಣಗಳ ವಿಷಚಕ್ರವು ಮುರಿದು ಹೋಗುವಂತೆ ಮಾಡಲು ಸಮರ್ಥನಾಗುತ್ತಾನೆ. ಏಕೆಂದರೆ 'ಅಹಂಕಾರ' ವೆಂಬ ದೇಹೋऽಹಂ ಭಾವನು ಮತ್ತು ಅದಕ್ಕೆ

ಸಹಕಾರಿಗಳಾದ ಮನ-ಬುದ್ಧಿ-ಚಿತ್ತ-ಇಂದ್ರಿಯಾದಿಗಳು ಸಂಪೂರ್ಣ ನಿಯಂತ್ರಣಕ್ಕೆ ಬರುವುವು. ಈ ಅಹಂಕಾರವನ್ನು ರಾವಣನಿಗೂ ಹಾಗೂ ಉಳಿದ ಕರಣಗಳನ್ನು ಅವನ ಅನುಚರರಾದ ಕುಂಭಕರ್ಣಾದಿಗಳಿಗೂ ಹೋಲಿಸಲಾಗಿದೆ. ಯಾವಾಗ ರಾವಣನೆಂಬ ಅಹಂಕಾರವು ನಾಶವಾಗುತ್ತದೋ ಆಗ ಉಳಿದ ಕರಣಗಳು ಸಂಪೂರ್ಣವಾಗಿ ತನ್ನ ನಿಯಂತ್ರಣಕ್ಕೆ ಬರುತ್ತವೆ.

**ಓ.ಸಂ.20 :** ಆದುದರಿಂದ ತನಗೆ ಎರಡನೇಯದಿಲ್ಲದ ಅದ್ವಯನಾದ ಪರಬ್ರಹ್ಮವು ಸಹಜವಾಗಿಯೇ ಪ್ರಾಪ್ತವಾಗುವುದು. ಶ್ರೀ ಗುರುವು ಇಂತಹ ಮನಸ್ಥಿತಿ ಇರುವ ಶಿಷ್ಯನಿಗೆ ಮಾಡುವ ಉಪದೇಶವು ವ್ಯರ್ಥವಾಗುವುದೆಂದು ಯೋಚಿಸುತ್ತಾನೆ.

**ವಿವರಣೆ :** ಈ ಓವೀಗೆ, ಶಿಷ್ಯನು ಗುರು ಉಪದೇಶದ ಮಹತ್ವವನ್ನು ತಿಳಿದು ಭಾವೋದ್ವೇಗಕ್ಕೆ ಒಳಗಾಗಿ ತನ್ನ ಧನ್ಯತೆಯನ್ನು ಪ್ರಕಟಪಡಿಸುವುದು ಮುಗಿಯುತ್ತದೆ. ಈ ಓವೀಯಲ್ಲಿ ತೀವ್ರ ಮುಮುಕ್ಷುವಾದ ಶಿಷ್ಯನಿಗೆ ಅದ್ವಯವಾದ ಪರತತ್ತ್ವವು ಸಹಜವಾಗಿ ಲಭಿಸುತ್ತದೆ ಎಂದು ತಿಳಿಸಲಾಗಿದೆ. ಶಿಷ್ಯನನ್ನು ನಿಮಿತ್ತ ಮಾಡಿಕೊಂಡು ಶ್ರೀಗಳು ಈ ಗ್ರಂಥವನ್ನು ಪಠಣ ಮಾಡುವವರಿಗೆ ಅಧಿಕಾರ ಸಂಪನ್ನನಾದ ಉತ್ತಮ ಶಿಷ್ಯನು ತನ್ನ ಗುರುವಿನ ಬಗ್ಗೆ ಹಾಗೂ ಉಪದೇಶವನ್ನು ನೀಡುವ ಈ ಗ್ರಂಥದ ಬಗ್ಗೆ ಯಾವ ಭಾವವನ್ನು ಹೊಂದಿರಬೇಕು ಎನ್ನುವುದನ್ನು ತಿಳಿಸಿದ್ದಾರೆ. ಆದರೆ ಕ್ಲಿಷ್ಟವಾದ ವೇದಾಂತ ಉಪದೇಶಕ್ಕೆ ಶಿಷ್ಯನಲ್ಲಿ ಇರಬೇಕಾದ ಸೂಕ್ತವಾದ ಮನಸ್ಥಿತಿಯು ಈ ಭಾವೋದ್ವೇಗವಲ್ಲ. ಆದುದರಿಂದ ಶ್ರೀಗುರುವು ಇಂತಹ ಪರಿಸ್ಥಿತಿಯಲ್ಲಿ ಶಿಷ್ಯನಿಗೆ ಉಪದೇಶ ಮಾಡುವುದು ವ್ಯರ್ಥವೆಂದು ತಿಳಿಯುತ್ತಾನೆ. ಏಕೆಂದರೆ ವಿಚಾರ ಪ್ರಧಾನವಾದ ಈ ಉಪದೇಶಕ್ಕೆ ಶಿಷ್ಯನಿಗೆ ಇರಬೇಕಾದುದು ಸಮಾಧಾನದ ಹಾಗೂ ಶಾಂತವಾದ ಮನಃಸ್ಥಿತಿಯು ಆಗಿರುತ್ತದೆ. ಆದುದರಿಂದ ಈ ಭಾವೋದ್ವೇಗವನ್ನು ತಗೆದು ಹಾಕಲು ಶ್ರೀ ಗುರುವು ಹೇಳುವುದನ್ನು ಮುಂದಿನ ಓವೀಗಳಲ್ಲಿ ತಿಳಿಸಲಾಗಿದೆ.

**ಓ.ಸಂ.21 :** ಶಿಷ್ಯನ ಮನಸ್ಸು ಆನಂದದಿಂದ ಭಾವನಾಪರವಶವಾಗಿರುವುದರಿಂದ ಗುರುವಿನ ವೈಚಾರಿಕ ಬೋಧೆಯು ಅವನ ಮನಸ್ಸಿನಲ್ಲಿ ನಾಟುವಂತಿಲ್ಲವೆಂದು ಗುರುವು ಮೌನದಿಂದ ಯೋಚಿಸಿದನು.

**ವಿವರಣೆ :** ಇಲ್ಲಿ ಶಿಷ್ಯನು ಅತ್ಯಂತ ಉತ್ತಮ ಅಧಿಕಾರಿಯಾದರೂ ಅವನು ಆನಂದದಿಂದ ಭಾವೋದ್ವೇಗಕ್ಕೆ ಒಳಗಾಗಿರುವುದರಿಂದ ಗುರುವು ತತ್ಕಾಲ ಶಿಷ್ಯನಿಗೆ ಉಪದೇಶಮಾಡುವುದು ವ್ಯರ್ಥವೆಂದು ಯೋಚಿಸುತ್ತಿದ್ದಾನೆ. ಏಕೆಂದರೆ, ಗುರುವು ಆ ಸಂದರ್ಭದಲ್ಲಿ ಒಂದು ವೇಳೆ

ಉಪದೇಶವನ್ನು ಮಾಡಿದರೂ ಕೂಡ ಅದು ಶಿಷ್ಯನ ಮನಸ್ಸಿನಲ್ಲಿ ಉಳಿಯುವಂತಿಲ್ಲ. ಮನಸ್ಸಿನಲ್ಲಿ ಭಾವನೆಗಳ ಮಹಾಪೂರವು ಬರುತ್ತಿರುವಾಗ ವಿಚಾರ ಪ್ರಧಾನವಾಗಿರುವ ವೇದಾಂತ ಬೋಧೆಗೆ ಅವಕಾಶವಿರುವುದಿಲ್ಲ. ಎಲ್ಲಿಯವರೆಗೆ ಶಿಷ್ಯನ ಮನಸ್ಥಿತಿಯು ಸಂಪೂರ್ಣವಾಗಿ ಬದಲಾಗಿ ಅವನು ಸಮಾಧಾನದಿಂದ ಹಾಗೂ ಶಾಂತಿಯಿಂದ ಗುರೂಪದೇಶವನ್ನು ಏಕಾಗ್ರತೆಯಿಂದ ಆಲಿಸಲು ಶಕ್ತನಾಗುತ್ತಾನೋ ಅಲ್ಲಿಯವರೆಗೆ ಅವನಿಗೆ ಗಹನವಾದ ಯಾವುದನ್ನೂ ಗುರುವು ಹೇಳುವಂತಿಲ್ಲ. ಅದಕ್ಕಾಗಿ ರುವು ಅವನ ಮನಃಸ್ಥಿತಿಯನ್ನು ಬದಲಾಯಿಸುವ ದೃಷ್ಟಿಯಿಂದ ಹೇಳಿದ ಮಾತುಗಳು ಮುಂದಿನ ಕೆಲವು ಓವೀಗಳಲ್ಲಿ ಬಂದಿವೆ.

**ಓ.ಸಂ.22 :** ಗುರುವು, ಶಿಷ್ಯನ ಮನಸ್ಥಿತಿಯನ್ನು ಬದಲಿಸಲು, ಶಿಷ್ಯನಿಗೆ 'ಅವನು ಹರ್ಷದಿಂದ ಓಲಾಡುತ್ತಿದ್ದಾನೆ, ಆದರೆ ಅವನನ್ನು ಮೃತ್ಯುವು ಬೆನ್ನು ಹತ್ತಿದೆ' ಎಂದು ಹೇಳುತ್ತಾನೆ.

**ವಿವರಣೆ :** ಶಿಷ್ಯನ ಭಾವೋದ್ವೇಗದ ಮನಃಸ್ಥಿತಿಯನ್ನು ಬದಲಿಸಿ, ಅವನ ಮನಸ್ಸನ್ನು ಶಾಂತಗೊಳಿಸಲು ಗುರುವು ಅವನಿಗೆ ಕೆಲವು ಎಚ್ಚರಿಕೆಯ ಮಾತುಗಳನ್ನು ಹೇಳುತ್ತಾನೆ. ಶಿಷ್ಯನು ಉಪದೇಶ ಕಾಲದಲ್ಲಿ ಈ ರೀತಿ ಆನಂದದ ಅತಿರೇಕದಿಂದ ಮನಸ್ಸಿನ ಸಮತೋಲನವನ್ನು ಕೆಡಿಸಿಕೊಳ್ಳುವುದು ಸರಿಯಲ್ಲ. ಏಕೆಂದರೆ ಅವನನ್ನು ಯಾವುದೇ ಕಾಲದಲ್ಲಿ ಮೃತ್ಯುವು ನುಂಗಿಬಿಡಬಹುದು. ಈ ಮೃತ್ಯುವು ಯಾವಾಗ ಯಾರಿಗೆ ಬರುತ್ತದೋ ಎಂದು ಹೇಳಲು ಬರುವಂತಿಲ್ಲ. ಆದುದರಿಂದ ಕಾಲಹರಣ ಮಾಡದೇ, ಸಿಕ್ಕಿರುವ ಕಾಲವನ್ನು ಸದ್ವಿನಿಯೋಗ ಮಾಡಿಕೊಳ್ಳಬೇಕು ಎಂದು ಶಿಷ್ಯನನ್ನು ಎಚ್ಚರಿಸಲು ಹೇಳುತ್ತಾನೆ. ಮುಂದಿನ ಓವೀಗಳಲ್ಲೂ ಇದೇ ವಿಷಯದ ಬಗ್ಗೆ ವಿವರಣೆ ಇರುತ್ತದೆ.

**ಓ.ಸಂ.23 :** ಕಾಲದ ಹಿಡಿತದಿಂದ ತಪ್ಪಿಸಿಕೊಂಡವರನ್ನು ಯಾರೂ ನೋಡಿಲ್ಲ ಮತ್ತು ಯಾರೂ ಕೇಳಿಲ್ಲ. ಕಾಲವು ಇಂದ್ರ, ಚಂದ್ರರು, ಮಹಾನ್ ಪುರುಷರಾದ ರಾಮ, ಕೃಷ್ಣರು, ಹಾಗೂ ಋಷಿಗಳನ್ನೂ ಬಿಡದೆ ನುಂಗಿದೆ.

**ವಿವರಣೆ :** ಇಲ್ಲಿ 'ಕಾಲ' ವನ್ನು 'ಮೃತ್ಯು' ಎಂಬ ಅರ್ಥದಲ್ಲಿ ಉಪಯೋಗಿಸಿದ್ದಾರೆ. ಏಕೆಂದರೆ ವಿಕಾರದ ಪರಿಣಾಮವೇ ಮೃತ್ಯುವಾಗಿದೆ. ಹಾಗೆಯೇ ಯಾವುದೇ ವಿಕಾರವನ್ನು ಕಾಲದ ಆಧಾರದ ಮೇಲೆಯೇ ಅರ್ಥ ಮಾಡಿಕೊಳ್ಳುತ್ತೇವೆ. ಆದುದರಿಂದ ಕಾಲದಲ್ಲಿಯೇ ಹುಟ್ಟುವುದು,

ವಿಕಾರವಾಗುವುದು ಹಾಗೂ ನಾಶವಾಗುವುದು ನಡೆಯುತ್ತಿರುತ್ತದೆ. ಕಾಲದಿಂದ ತಪ್ಪಿಸಿಕೊಳ್ಳುವುದೆಂದರೆ ಮೃತ್ಯುವನ್ನು ಜಯಿಸುವುದೇ ಆಗಿರುತ್ತದೆ. ಈವರೆಗೆ ಮೃತ್ಯುವನ್ನು ಜಯಿಸುವುದು ಯಾರಿಂದಲೂ ಸಾಧ್ಯವಿಲ್ಲ. ಮೃತ್ಯುವನ್ನು ಜಯಿಸಿದವರನ್ನು ಈವರೆಗೆ ಯಾರೂ ಕಂಡಿಲ್ಲ. ಹಾಗೂ ಅವರ ಬಗ್ಗೆ ಯಾರೂ ಕೇಳಿಲ್ಲ. ಆದರೆ ಅಶ್ವತ್ಥಾಮಾದಿ ಸಪ್ತ ಚಿರಂಜೀವಿಗಳ ಬಗ್ಗೆ ಕೇಳಿದ್ದೇವೆ. ಆದರೆ ಇವರೂ ಕೂಡ ಕಲ್ಪಾಂತದಲ್ಲಿ ಮೃತ್ಯುವಶರಾಗುವವರೇ ಆಗಿದ್ದಾರೆ. ಆದುದರಿಂದ ಸಾಯದೇ ನಿತ್ಯ ಇರುವವರ ಬಗ್ಗೆ ಯಾರೂ ಕೇಳಿಲ್ಲ. ಅಂದರೆ ಹುಟ್ಟಿದ ಮೇಲೆ ಸಾವು ನಿಶ್ಚಯವಾಗಿದೆ ( ಜಾತಸ್ಯ ಹಿ ಧ್ರುವೋ ಮೃತ್ಯುಃ – ಭ.ಗೀ.೨.೨೭). ಮೃತ್ಯುವು ಮಹಾನ್ ಪುರುಷರಿಗೂ ತಪ್ಪಿಲ್ಲ. ನಾವು ದೇವರೆಂದು ಯಾವ ಅವತಾರೀ ಪುರುಷರಾದ ರಾಮ-ಕೃಷ್ಣರನ್ನು ಪೂಜಿಸುತ್ತೇವೆಯೋ ಅವರಿಗೂ ಕೂಡ ಮೃತ್ಯುವು ಒದಗಿ ಬಂದಿರುವುದು ರಾಮಾಯಣ ಹಾಗೂ ಭಾಗವತ ಗ್ರಂಥಗಳಲ್ಲಿಯೇ ಉಕ್ತವಾಗಿರುತ್ತದೆ. ಪರಮಾತ್ಮನೂ ಕೂಡ 'ಜೀವ' ರೂಪದಿಂದ ಅವತರಿಸಿದಾಗ (ಹುಟ್ಟಿದಾಗ) ಅವನಿಗೂ ಸಾವು ಎಂಬುದು ನಿಶ್ಚಿತವಾಗಿರುತ್ತದೆ. ಹಾಗೆಯೇ ಯುಗ-ಯುಗಾಂತರದವರೆಗೆ ಬದುಕಬಲ್ಲ ವಶಿಷ್ಠ-ವಿಶ್ವಾಮಿತ್ರಾದಿ ಋಷಿಗಳೂ ಕೂಡ ಸಾವನ್ನಪ್ಪಿದ್ದಾರೆ. ಈಶ್ವರನೆಂದು ಅಥವಾ ಸಗುಣಬ್ರಹ್ಮನೆಂದು ಹೆಸರಾದ ಚತುರ್ಮುಖ ಬ್ರಹ್ಮನಿಗೂ ಕೂಡ ಹುಟ್ಟು-ಸಾವುಗಳುಂಟು. ಅವನ ಆಯುಷ್ಯಕ್ಕೇನೇ ಕಲ್ಪವೆಂದು ಹೆಸರಿದೆ. ಕಲ್ಪಾಂತದಲ್ಲಿ ಅವನೂ ಕೂಡ ಮೃತ್ಯುವಶನಾಗುತ್ತಾನೆ. ಹೊಸ ಕಲ್ಪವು ಪ್ರಾರಂಭವಾದಾಗ ಹೊಸ ಬ್ರಹ್ಮನೇ ಹುಟ್ಟುತ್ತಾನೆ.

**ಶ್ಲೋ.ಸಂ.24 :** ಕಾಲನಿಂದ ಇಂದ್ರ, ಚಂದ್ರ ಹಾಗೂ ದೇವಾಸುರರು ನುಂಗಲ್ಪಟ್ಟಿದ್ದಾರೆ. ಸಮಸ್ತ ಜೀವರು ಮೃತ್ಯುವಶರಾಗುತ್ತಾರೆ. ಹಾಗೆಯೇ ಬ್ರಹ್ಮನ ಆಯುಷ್ಯದ ಅಂತ್ಯದಲ್ಲಿ ಅಂದರೆ ಕಲ್ಪಾಂತದಲ್ಲಿ ಎಲ್ಲವನ್ನೂ ಕಾಲವು ನುಂಗಿಹಾಕುತ್ತದೆ.

**ವಿವರಣೆ :** ಪಶು, ಪಕ್ಷಿ, ಪ್ರಾಣಿ ಹಾಗೂ ಮನುಷ್ಯರು – ಹೀಗೆ ಸಕಲ ಜೀವ ರಾಶಿಯು ಮೃತ್ಯುವಶವಾಗುತ್ತಿರುವುದು ಸಕಲರ ಅನುಭವಕ್ಕೆ ಬರುತ್ತಿದೆ. ಈವರೆಗೆ ಯಾರೂ ಕೂಡ ಈ ಮೃತ್ಯುವನ್ನು ಜಯಿಸಿಲ್ಲ. ಇದಕ್ಕೆ ದೇವಾಸುರರು ಅಪವಾದವಲ್ಲ. ಇಂದ್ರ, ಚಂದ್ರ, ಸೂರ್ಯಾದಿ ದೇವತೆಗಳು ತಮ್ಮ ಪುಣ್ಯ ಇರುವಷ್ಟು ಕಾಲ ಮಾತ್ರ ಆ ಪದವಿಯಲ್ಲಿ

ಅವರು ಆ ಲೋಕದಿಂದ ಪದಚ್ಯುತರಾಗಿ ಉಳಿಯಬಲ್ಲರು. ಪುಣ್ಯ ಮುಗಿದ ಕ್ಷಣವೇ ಮರ್ತ್ಯಲೋಕಕ್ಕೆ (ಭೂಲೋಕಕ್ಕೆ) ಬರಬೇಕಾಗುವುದು ("ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" – ಭ.ಗೀತೆ.೯.೨೧). ಇನ್ನು ಸಾಮಾನ್ಯ ದೇವ, ಮನುಷ್ಯ ಹಾಗೂ ರಾಕ್ಷಸರ ಪಾಡೇನು ? ಅವರು ನಿಶ್ಚಿತವಾಗಿ ಸಾವನ್ನಪ್ಪುವರು. ಇನ್ನು ಕಲ್ಪಾಂತದಲ್ಲಿ ಸೃಷ್ಟಿಕರ್ತ ಚತುರ್ಮುಖ ಬ್ರಹ್ಮನ ಜೊತೆಗೆ ಅವನ ಸಮಸ್ತ ದೃಷ್ಟಿಯೂ ಅಂದರೆ ಇಡೀ ಬ್ರಹ್ಮಾಂಡವೇ ನಿರ್ನಾಮವಾಗಿ ಹೋಗುವುದು. ಆದುದರಿಂದ ಕಾಲನಿಗೆ ಸಿಗದೇ ಇರುವುದು ಯಾವುದೂ ಇಲ್ಲ. ಈ ಮಹಾಕಾಲನೇ ಮೃತ್ಯು ಸ್ವರೂಪನಾಗಿದ್ದಾನೆ.

**ಓ.ಸಂ.25 :** ಇದನ್ನೆಲ್ಲ ತಿಳಿಸಿದ ಗುರುವು ಶಿಷ್ಯನಿಗೆ, ಅವನನ್ನು ಈ ಕಾಲವು ಬಿಡುವುದಿಲ್ಲ. ಆದರೆ ಅವನು ಅದನ್ನು ತಿಳಿಯದೇ ಆನಂದದಿಂದ ಕುಳಿತುಬಿಟ್ಟಿದ್ದಾನೆ. ಇನ್ನು ಮೇಲಾದರೂ ಅವನು ಈ ವಿಷಯದಲ್ಲಿ ಎಚ್ಚರದಿಂದಿರಬೇಕು ಎಂದು ಹೇಳುತ್ತಾರೆ.

**ವಿವರಣೆ :** ಹಿಂದಿನ ಓವೀಗಳಲ್ಲಿ ಕಾಲವು ಹೇಗೆ ಸಕಲವನ್ನೂ ನುಂಗುತ್ತಿದೆ ಎಂದು ತಿಳಿಸಿದ ಗುರುವು ಕೊನೆಯದಾಗಿ ಪುನಃ ಶಿಷ್ಯನನ್ನು ಎಚ್ಚರಿಸುತ್ತಿದ್ದಾನೆ. ಅವನನ್ನು ಕಾಲವು ಬೆನ್ನುಹತ್ತಿದೆ. ಅಂದರೆ ಸ್ವಲ್ಪ ಸ್ವಲ್ಪವೇ ಈಗಾಗಲೇ ನುಂಗುತ್ತಾ ಬಂದಿದೆ. ಯಾವ ವೇಳೆಯಲ್ಲಿಯಾದರೂ ಅವನನ್ನು ಪೂರ್ಣ ನುಂಗಿ ಮೃತ್ಯುವಶ ಮಾಡಿಬಿಡಬಹುದು. ಆದರೆ ಇದನ್ನು ತಿಳಿಯದ ಶಿಷ್ಯನು ಉಪದೇಶ ಸಮಯದಲ್ಲಿ ಆನಂದ ಭಾಷ್ಪಗಳನ್ನು ಸುರಿಸುತ್ತಾ ಕಾಲ ಹರಣವನ್ನು ಮಾಡುತ್ತಿದ್ದಾನೆ. ಇನ್ನು ಮೇಲಾದರೂ ಗುರುಗಳ ಉಪದೇಶದ ಕಡೆಗೆ ಗಮನ ಕೊಡಬೇಕು ಎಂದು ಎಚ್ಚರಿಕೆಯ ಮಾತುಗಳನ್ನು ಆಡುತ್ತಾರೆ.

**ಓ.ಸಂ.26 :** ಹೀಗೆ ಎಚ್ಚರಿಸಿದ ಗುರುವಿನ ಮಾತಿನಿಂದ ಶಿಷ್ಯನು ಹೆದರಿದನು. ಅವನ ಮನಃಸ್ಥಿತಿಯು ತಾನೇ ತಾನಾಗಿ ಬದಲಾಯಿತು. ಅವನ ಕಣ್ಣಿನಿಂದ ನೀರು ಸುರಿಯತೊಡಗಿತು. ಅವನ ದೇಹ ಕಂಪಿಸಲಾರಭಿಸಿತು.

**ವಿವರಣೆ :** ಶಿಷ್ಯನು ತನ್ನ ಗುರುವಿನ ಎಚ್ಚರಿಕೆಯ ಮಾತುಗಳನ್ನು ಕೇಳಿ ಭಯಭೀತನಾದನು. ತಾನು ಯಾವುದೇ ಕ್ಷಣದಲ್ಲಿ ಮೃತ್ಯುವಶವಾಗಬಹುದಾದ್ದರಿಂದ ಜ್ಞಾನವಿಹೀನನಾಗಿಯೇ ಸಾಯುವುದರಿಂದ ಪುನಃ ಹುಟ್ಟು-ಸಾವುಗಳ ವಿಷಚಕ್ರದಲ್ಲಿ ಬೀಳುವ ಪರಿಸ್ಥಿತಿಯು ತನಗೆ

ಎದುರಾಯಿತು ಎಂದು ಯೋಚಿಸಿ ಶಿಷ್ಯನು ದುಃಖದಿಂದ ಕಣ್ಣೀರು ಸುರಿಸತೊಡಗಿದನು. ಅವನ ಇಡೀ ದೇಹವು ಭಯದಿಂದ ಕಂಪಿಸತೊಡಗಿತು. ಮೊದಲು ಆನಂದ ಭಾಷ್ಪಗಳನ್ನು ಸುರಿಸುತ್ತಿದ್ದ ಅವನ ಮನಸ್ಸು ತಾನೇ ತಾನಾಗಿ ವಿರುದ್ಧ ಮನಃಸ್ಥಿತಿಯನ್ನು ಪಡೆಯಿತು. ಅವನಿಗೆ ತಾನು ಕೃತಕೃತ್ಯನಾದೆನೆಂಬ ಮೊದಲಿನ ವಿಶ್ವಾಸವು ಹಾರಿಹೋಗಿ ತಾನು ಎಣಿಸಿದಂತೆ ಆಗಲಿಕ್ಕಿಲ್ಲವೆಂಬ ಚಿಂತೆಯು ಅವನನ್ನು ಆವರಿಸಿತು.

**ಓ.ಸಂ.27 :** ಶಿಷ್ಯನಿಗೆ ಮಾತನಾಡಬೇಕೆನಿಸಿದರೂ ಆಗಲೊಲ್ಲದು. ದುಃಖದಿಂದ ಅವನ ಕಂಠವು ತುಂಬಿಬಂದಿದೆ. ಅವನು ಸ್ವಲ್ಪ ಹೊತ್ತು ಚಿಂತಿಸಿದ ನಂತರ ತನಗೆ ತಾನೇ ವಿಚಾರ ಮಾಡಲು ಪ್ರಾರಂಭಿಸಿದನು.

**ವಿವರಣೆ :** ಈ ಓವೀಯಲ್ಲೂ ಶಿಷ್ಯನ ದು:ಖದ ಪರಿಸ್ಥಿತಿಯನ್ನು ವಿವರಿಸಿದೆ. ಕಾಲನ ಹೆದರಿಕೆಯಿಂದ ಅವನಿಗೆ ಯಾವ ಮಾತೂ ಬಾಯಿಯಿಂದ ಹೊರಡಲೊಲ್ಲದು. ಏಕೆಂದರೆ ಅವನ ಕಂಠವು ಮಾತನಾಡದಂತೆ ತುಂಬಿಬಂದಿದೆ. ಹೀಗೆ ಕಂಠವು ಬಿಗಿದಿದ್ದರಿಂದ ಅವನಿಗೆ ಮಾತು ಹೊರಡದೇ ಅವನು ಸ್ವಲ್ಪ ಹೊತ್ತು ತನ್ನ ಅಸಹಾಯಕ ಪರಿಸ್ಥಿತಿಯ ಕುರಿತು ಚಿಂತಿತನಾದನು. ಆಮೇಲೆ ತನಗೆ ತಾನೇ ಸಮಾಧಾನ ಮಾಡಿಕೊಂಡು ಮೊದಲು ಗುರುಗಳು ಹೇಳಿದ ಮಾತುಗಳನ್ನು ಮೆಲುಕು ಹಾಕತೊಡಗಿದನು. ಮತ್ತು ಈಗ ಎದುರಿಸಬೇಕಾದ ಸಂಕಟದ ಪರಿಸ್ಥಿತಿಯನ್ನು ನಿಭಾಯಿಸುವ ಪರಿಯನ್ನು ಕುರಿತು ತನ್ನಲ್ಲೇ ತಾನು ವಿಚಾರಿಸಹತ್ತಿದನು.

**ಓ.ಸಂ.28 :** ಶಿಷ್ಯನು ಹೀಗೆ ವಿಚಾರ ಮಾಡುತ್ತಾನೆ: ತನ್ನ ಸದ್ಗುರುವು ಕೃಪಾಘನನಿದ್ದಾನೆ. ಅವನು ತನ್ನನ್ನು ಕಾಲನಿಂದ ರಕ್ಷಿಸುತ್ತಾನೆ. ಆದರೆ ತಾನು ಹಿಂದೆ ಇದೇ ಕಾಲನನ್ನು ಧಿಕ್ಕಾರ ಮಾಡಿ ಮಾತಾಡಿದ್ದರಿಂದ ಈಗ ಅದೇ ಕಾಲನ ಬಗ್ಗೆ ಮಾತನಾಡಲು ತಾನು ಭಯಪಡುತ್ತಿದ್ದಾನೆ.

**ವಿವರಣೆ :** ಸಮಾಧಾನ ತಂದುಕೊಂಡು, ಶಿಷ್ಯನು ಹೀಗೆ ತನ್ನಲ್ಲೇ ಯೋಚಿಸುತ್ತಾನೆ. ತನ್ನ ಸದ್ಗುರುವು ಕೃಪಾಸಿಂಧುವಿದ್ದಾನೆ. ಅವನು ತನ್ನ ಸಂಕಟವನ್ನು ನಿಶ್ಚಯವಾಗಿಯೂ

ಪರಿಹರಿಸುವನು. ಅವನು ಮಾತ್ರ ತನ್ನನ್ನು ಈ ಕಾಲನ ಪಾಶದಿಂದ ರಕ್ಷಿಸಬಲ್ಲವನಾಗಿದ್ದಾನೆ. ಈಗ ಬೇರೆ ಯಾರೂ ತನ್ನನ್ನು ಕಾಪಾಡುವವರಿಲ್ಲ. ಹಿಂದೆ ತಾನು, ಯಾವ ಇದೇ ಕಾಲನ ಬಗ್ಗೆ ಅದನ್ನು ನಿಸ್ಸಂತಾನಗೊಳಿಸುವೆನು ಎಂದು ಅವಿವೇಕದಿಂದ ಹೇಳಿದ್ದನೋ ಈಗ ಅದರಿಂದ ಅವನಿಗೆ ರಕ್ಷಣೆ ಬೇಕಾಗಿದೆ ಎಂದು ಹೇಳಲು ಭಯಪಡುತ್ತಿದ್ದಾನೆ. ಹೀಗೆ ಶಿಷ್ಯನ ಮನಸ್ಸಿನ ಪರಿಸ್ಥಿತಿಯು ತಾನೇ ತಾನಾಗಿ ಬದಲಾಗಿದೆ.

**ಓ.ಸಂ.29 :** ಹೀಗೆ ಶಿಷ್ಯನು ಧೈರ್ಯದ ಮನಃಸ್ಥಿತಿಯನ್ನು ತಂದುಕೊಂಡು ತನ್ನ ಗುರುವನ್ನು ಪ್ರಾರ್ಥಿಸಲು ತೊಡಗಿದನು. ಗುರುವನ್ನು ಕರುಣಾಳುವೇ ಎಂದು ಸಂಬೋಧಿಸಿ ಗುರುವು ಮಾತ್ರ ತನ್ನನ್ನು ಸಂರಕ್ಷಿಸಲು ಸಮರ್ಥನಿರುವನೆಂದು ತಿಳಿಸಿದನು.

**ವಿವರಣೆ :** ಹೀಗೆ ಭಾವೋದ್ವೇಗದಿಂದ ಸಮಾಧಾನ ಚಿತ್ತಕ್ಕೆ ಮರಳಿದ ಶಿಷ್ಯನು ಧೈರ್ಯ ತಂದುಕೊಂಡು ತನ್ನ ಗುರುವನ್ನು ಅಪ್ಪಾ, ಕಾರುಣ್ಯ ಮೂರ್ತಿಯೇ, ಎಂದು ಸಂಬೋಧಿಸಿ ತನ್ನ ವಿಚಾರವನ್ನು ಅತ್ಯಂತ ವಿನಯದಿಂದ ಹೇಳಲು ಪ್ರಾರಂಭಿಸಿದನು. ತನ್ನನ್ನು ಮೃತ್ಯುಪಾಶದಿಂದ ಸಂರಕ್ಷಿಸಲು ತನ್ನ ಗುರುವಲ್ಲದೇ ಮತ್ತಾರೂ ಸಮರ್ಥರಿಲ್ಲವೆಂದು ತಿಳಿಸಿ ತನ್ನನ್ನು ದಯಮಾಡಿ ರಕ್ಷಿಸಬೇಕೆಂದು ಪರಿಪರಿಯಿಂದ ಗುರುವನ್ನು ಕೇಳಿಕೊಂಡನು. ಹೀಗೆಯೇ ಶಿಷ್ಯನ ಮುಂದುವರಿದ ಪ್ರಾರ್ಥನೆಯನ್ನು ಮುಂದಿನ ಮೂರೂ ಓವೀಗಳಲ್ಲಿ ವಿವರಿಸಲಾಗಿದೆ.

**ಓ.ಸಂ.30 :** ಶಿಷ್ಯನು ಮುಂದುವರಿದು ತಾನು ಗುರುವಿನ ಪಾದಗಳಿಗೆ ಶರಣು ಬಂದಿದ್ದಾನೆ. ಅವನು ತನ್ನನ್ನು ಕಾಲನಿಂದ ರಕ್ಷಣೆ ಮಾಡದಿದ್ದರೆ ತಾನು ಅದರ ಪಾಶದಲ್ಲಿ ಸಿಕ್ಕು ನಾಶವಾಗುವುದು ಖಂಡಿತವಾಗಿರುತ್ತದೆ ಎಂದು ಗುರುವಿಗೆ ಪ್ರಾರ್ಥಿಸಿದನು.

**ವಿವರಣೆ :** ಇಲ್ಲಿ ಶಿಷ್ಯನು ಗುರುವನ್ನು ತನ್ನನ್ನು ಮೃತ್ಯುಭಯದಿಂದ ತಪ್ಪಿಸಬೇಕೆಂದು ಗುರುವಿಗೆ ಸಂಪೂರ್ಣ ಶರಣಾಗಿ, ಅಂದರೆ ತನ್ನನ್ನು ತಾನು ಅರ್ಪಿಸಿಕೊಂಡು, ಪರಿಪರಿಯಿಂದ ಕೇಳುತ್ತಿದ್ದಾನೆ. ಮೊದಲು ತನಗೆ ಗುರುವಿನಿಂದ ಭವ-ಬಂಧನವು ಆತ್ಮಜ್ಞಾನದಿಂದ ಕಳಚಿಹೋಗುತ್ತದೆ ಎಂದು ಅತ್ಯಂತ ಸಂತೋಷಿತನಾಗಿದ್ದ. ಇದು ಗುರುವಿನಲ್ಲಿ ನ್ಯಾಯವಾಗಿ

ಕೇಳಬೇಕಾದ ಪಾರಮಾರ್ಥಿಕ ಸುಖವೇ ಆಗಿತ್ತು. ಆದರೆ ಈಗ ಅವನು ಮೃತ್ಯು ಪಾಶದಿಂದ ಬಿಡಿಸಿಕೊಳ್ಳಲು ಗುರುವನ್ನು ಬೇಡಿಕೊಳ್ಳುವುದು ಐಹಿಕ ಸುಖವಾಗಿರುವುದರಿಂದ ಇದು ನ್ಯಾಯಯುತವಾಗಿಲ್ಲವೆಂದು ಅನ್ನಿಸಬಹುದು. ಆದರೆ ಇದು ಸರಿಯಲ್ಲ. ಅವನು ಈಗ ಈ ಬೇಡಿಕೆಯನ್ನು ಇಡುತ್ತಿರುವುದು ಪಾರಮಾರ್ಥಿಕ ಗುರಿಯನ್ನು ಸಾಧಿಸಲು ಮಾತ್ರ ಆಗಿರುವುದರಿಂದ ಇದು ಸಮಂಜಸವೆಂದೇ ತಿಳಿಯಬೇಕು. ಏಕೆಂದರೆ ಶರೀರದ ಸೌಖ್ಯವಿರದೇ ಯಾವುದೇ ಧಾರ್ಮಿಕ ಅಥವಾ ಆಧ್ಯಾತ್ಮಿಕ ಸಾಧನೆಯು ಸಾಧ್ಯವಿಲ್ಲ. "ಶರೀರಮಾದ್ಯಮ್ ಖಲು ಧರ್ಮ ಸಾಧನಮ್". ಇಲ್ಲಿ ಮುಖ್ಯವಾಗಿ ತಿಳಿಯಬೇಕಾಗಿರುವುದೇನೆಂದರೆ, ಶಿಷ್ಯನು ಗುರುವಿಗೆ ಸಂಪೂರ್ಣವಾಗಿ ಶರಣಾಗತನಾದಲ್ಲಿ ಗುರುವು ಶಿಷ್ಯನ ಐಹಿಕ ಹಾಗೂ ಪಾರಮಾರ್ಥಿಕ ಬೇಡಿಕೆಗಳನ್ನು ಈಡೇರಿಸಲು ಸಂಪೂರ್ಣವಾಗಿ ಸಮರ್ಥನಾಗಿರುತ್ತಾನೆ.

**ಓ.ಸಂ.31 :** 'ತನ್ನನ್ನು ಗುರುವು ಹೀಗೆ ಕಾಲನ ಕೈಯಲ್ಲಿ ಒಪ್ಪಿಸಬಾರದು. ತನಗೆ ಆಧಾರವಾಗಿರುವ ದಯಾಘನನಾದ ಗುರುವನ್ನು ಬಿಟ್ಟು ತನಗೆ ಆಶ್ರಯ ಕೊಡುವವರು ಬೇರೆ ಯಾರೂ ಇರುವುದಿಲ್ಲ....' ಎಂದು ಶಿಷ್ಯನು ಗುರುವಿನಲ್ಲಿ ಬೇಡುತ್ತಿದ್ದಾನೆ.

**ವಿವರಣೆ :** ಇಲ್ಲಿ ಶಿಷ್ಯನು ತನ್ನ ಗುರುವನ್ನು ಆರೋಪಿಸುತ್ತಿದ್ದಾನೆ. ಗುರುವೇ ತನ್ನನ್ನು ಹಿಡಿದು ಕಾಲನಿಗೆ ಒಪ್ಪಿಸುತ್ತಿದ್ದಾನೆ. ಕೃಪಾಳುವಾದ ಗುರುವು ಸಂಪೂರ್ಣ ಶರಣಾಗತನಾದ ಶಿಷ್ಯನಿಗೆ ಹೀಗೆ ಮಾಡುವುದು ಸರಿಯಲ್ಲ. ಏಕೆಂದರೆ ಆಶ್ರಯ ಕೇಳಿಬಂದ, ಸಂಪೂರ್ಣ ಶರಣಾಗತನಾದ, ಯಾವುದೇ ಜೀವವನ್ನು ರಕ್ಷಣೆಮಾಡುವುದು ಗುರುವಿನ ಹೊಣೆಯಾಗಿರುತ್ತದೆ. ಹೀಗೆ ಶಿಷ್ಯನು ಗುರುವನ್ನು ಕೇಳಿಕೊಳ್ಳುತ್ತಿರುವುದನ್ನು ನೋಡಿದರೆ, ಶಿಷ್ಯನು ಗುರುವನ್ನು ಸಾಕ್ಷಾತ್ ಮಹಾಕಾಲ ಸ್ವರೂಪನಾದ ಈಶ್ವರನೆಂದೇ ಭಾವಿಸಿದ್ದಾನೆ. ಈಶ್ವರನಾದರೋ ಕೇವಲ ಇಷ್ಟಾರ್ಥ ಸಿದ್ಧಿಗೆ ಕಾರಣನಾಗುತ್ತಾನೆ. ಆದರೆ ಗುರುವು ಈ ಐಹಿಕ ಇಷ್ಟಾರ್ಥ ಸಿದ್ಧಿಗಳನ್ನಲ್ಲದೇ ಅಧಿಕಾರೀ ಶಿಷ್ಯರಿಗೆ ಜ್ಞಾನವನ್ನೂ ದಯಪಾಲಿಸಿ ಮೋಕ್ಷಕಾರಕನೂ ಆಗುತ್ತಾನೆ. ಹೀಗೆ ಈಶ್ವರನಿಗಿಂತ ಗುರುವು ಶ್ರೇಷ್ಠನೆನ್ನುವುದು ತಮ್ಮ ಭಕ್ತರಿಗೆ ತಿಳಿಸಲು ಈ ದೀರ್ಘ ಗುರು-ಶಿಷ್ಯ ಸಂವಾದವನ್ನು ಶ್ರೀಗಳು ಬರೆದಿದ್ದಾರೆ.

**ಓ.ಸಂ.32 :** ಹೀಗೆ ಅತ್ಯಂತ ವಿನಯದಿಂದ ಶಿಷ್ಯನು ಗುರುವಿನಲ್ಲಿ ನಿವೇದನೆ ಮಾಡಿಕೊಂಡು ಅವನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತಾನೆ. ಆಗ ಗುರುವು ಶಿಷ್ಯನಿಗೆ ಅಭಯ ಹಸ್ತವನ್ನು ನೀಡುತ್ತೇನೆಂದು ಆಶ್ವಾಸನೆಯನ್ನು ಕೊಡುತ್ತಾನೆ.

**ವಿವರಣೆ :** ಶಿಷ್ಯನು ಹಿಂದಿನ ಓವೀಗಳಲ್ಲಿ ತಿಳಿಸಿದಂತೆ ಗುರುವಿನಲ್ಲಿ ತನ್ನ ಪ್ರಾರ್ಥನೆಯನ್ನು ನಿವೇದಿಸಿಕೊಂಡು ಅವನಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡುತ್ತಾನೆ. ಹೀಗೆ ಸಂಪೂರ್ಣವಾಗಿ ಶರಣಾಗತನಾದ ಶಿಷ್ಯನನ್ನು ಉದ್ಧಾರ ಮಾಡುವ ಉದ್ದೇಶದಿಂದ ಕರುಣಾಳುವಾದ ಶ್ರೀ ಗುರುವು ಅತ್ಯಂತ ಕರುಣೆಯಿಂದ ಶಿಷ್ಯನನ್ನು ಸಮಾಧಾನ ಮಾಡುತ್ತಾ ಅವನನ್ನು ರಕ್ಷಣೆ ಮಾಡುವ ಆಶ್ವಾಸನೆಯನ್ನು ಕೊಡುತ್ತಾನೆ. ಮುಂದಿನ ಓವೀಯಿಂದ ಗುರುವು ಹೇಳಿದ ಮಾತುಗಳನ್ನು ವಿವರಿಸಲಾಗಿದೆ. ಈ ವರೆಗಿನ ದೀರ್ಘವಾದ ಗುರು-ಶಿಷ್ಯರ ಸಂವಾದವನ್ನು ಕೊಟ್ಟಿರುವ ಉದ್ದೇಶವೆಂದರೆ ಯಾವುದೇ ಶಿಷ್ಯನು ತನ್ನ ಗುರುವಿನ ಮಹತ್ವವನ್ನು ತಿಳಿದು ಅತ್ಯಂತ ವಿನಯದಿಂದ ನಿರಹಂಕಾರಿಯಾಗಿ ತನ್ನನ್ನು ತಾನು ಅವನಿಗೆ ಸಂಪೂರ್ಣವಾಗಿ ಸಮರ್ಪಣೆ ಮಾಡಿಕೊಂಡಾಗಲೇ ಕೃಪಾಳುವಾದ ಗುರುವು ತನ್ನ ಜ್ಞಾನಾಮೃತದಿಂದ ಶಿಷ್ಯನನ್ನು ಉದ್ಧಾರ ಮಾಡುತ್ತಾನೆ ಎನ್ನುವುದೇ ಆಗಿರುತ್ತದೆ.

**ಓ.ಸಂ.33 :** ಗುರುವು, ತಾನು ಆ ಶಿಷ್ಯನನ್ನು ಕಾಲನ ಕೈಯಲ್ಲಿ ಒಪ್ಪಿಸುತ್ತಾನೆಂದು ಸಂಶಯಪಡುವುದು ಬೇಡ; ಯಾವ ಹೆದರಿಕೆಯಿಲ್ಲದೇ ಅವನು ತಾನು ಹೇಳುವ ಜ್ಞಾನಕ್ಕಿರುವ ಅಧಿಕಾರ ಹಾಗೂ ಅನಧಿಕಾರದ ವಿವೇಕದ ಬಗ್ಗೆ ಕೇಳಬೇಕೆಂದು ಗುರುವು ಶಿಷ್ಯನಿಗೆ ಹೇಳುತ್ತಾನೆ.

**ವಿವರಣೆ :** ಗುರುವು, ತಾನು ಶಿಷ್ಯನನ್ನು ಕಾಲನ ಕೈಗೆ ಒಪ್ಪಿಸುತ್ತಾನೆಂಬ ಶಿಷ್ಯನ ಸಂಶಯ ಸರಿಯಲ್ಲ. ಗುರುವು ತನ್ನನ್ನು ಆಶ್ರಯಿಸಿದವರಿಗೆ ಎಂದೂ ನಿರಾಶೆಯನ್ನು ಉಂಟುಮಾಡುವುದಿಲ್ಲ. ಹೀಗೆ ಶಿಷ್ಯನನ್ನು ಸಮಾಧಾನಪಡಿಸಿ ಶಿಷ್ಯನಿಗೆ ಜ್ಞಾನಕ್ಕೆ ಇರಬೇಕಾದ ಅಧಿಕಾರೀ ಲಕ್ಷಣಗಳನ್ನು ತಿಳಿಸಲು ಗುರುವು ಅವನಿಗೆ 'ಜ್ಞಾನಕ್ಕೆ ಅಧಿಕಾರೀ ಯಾರು' ಹಾಗೂ 'ಅನಧಿಕಾರೀ ಯಾರು' ಎನ್ನುವ ವಿವೇಕವನ್ನು ಉಂಟುಮಾಡುವ ಉದ್ದೇಶದಿಂದ ಹೇಳಲು ಉಪಕ್ರಮಿಸುತ್ತಾನೆ. ಇಲ್ಲಿಂದ ಜ್ಞಾನಾಧಿಕಾರೀ ಲಕ್ಷಣಗಳನ್ನು ನಿರೂಪಿಸುವ ಎರಡನೆಯ ಅಧ್ಯಾಯದ ಮುಖ್ಯ ವಿಷಯವು ಪ್ರಾರಂಭವಾಗುತ್ತದೆ.

ಓ.ಸಂ.34 : ವೇದಾಂತ ವಿಷಯಗಳನ್ನು ಒಂದೊಂದಾಗಿ ನಿಧಾನವಾಗಿ ಗುರುವು ಸ್ಪಷ್ಟಪಡಿಸುತ್ತಾ ಹೋದಂತೆ ಶಿಷ್ಯನನ್ನು ಬಿಟ್ಟು ಕಾಲನೂ ಕೂಡ ಹಾಗೆಯೇ ಓಡಿಹೋಗುವನು. ಬುದ್ಧಿಯಿಂದ ಸಕಲವೂ ನಶ್ವರವೆಂದು ತಿಳಿಸಿ ಕೇವಲ ಆತ್ಮನೊಂದೇ ಸತ್ಯವೆಂಬುದನ್ನು ಶಿಷ್ಯನಿಗೆ ಮನವರಿಕೆ ಮಾಡಿಕೊಡುವನು.

ವಿವರಣೆ : ಗುರುವು ಶಿಷ್ಯನಿಗೆ ಒಂದೊಂದಾಗಿ ವೇದಾಂತ ವಿಷಯಗಳನ್ನು ಸ್ಪಷ್ಟ ಪಡಿಸುತ್ತಾ ಹೋದಂತೆ ಅವನ ಮೃತ್ಯುಭಯವೂ ಓಡಿ ಹೋಗುವುದು. ಕೃಪಾಸಿಂಧುವಾದ ಗುರುವು ಶಿಷ್ಯನನ್ನು ಉದ್ಧಾರಮಾಡುವ ಬಗ್ಗೆ ಅಭಯ ಹಸ್ತವನ್ನು ನೀಡಿದಾಗ ಅಲ್ಲಿ ಕಾಲನಿಗೆ ಅವಕಾಶವಿರುವುದು ಸಾಧ್ಯವಿಲ್ಲ. ಹೀಗೆ ಶಿಷ್ಯನನ್ನು ಸಮಾಧಾನಪಡಿಸಿದ ಗುರುವು ಗ್ರಂಥದ ವಿಷಯವನ್ನು ಈ ಓವೀಯಲ್ಲಿ ಪ್ರಸ್ತಾಪ ಮಾಡಿದ್ದಾನೆ. ಬುದ್ಧಿಯಿಂದ ಯುಕ್ತಿಯನ್ನು ಬಳಸಿ ಶಿಷ್ಯನಿಗೆ ತಿಳಿಯುವಂತೆ ಸಮಸ್ತವೂ ಮಿಥ್ಯೆಯೆಂದೂ ಹಾಗೂ ಅದ್ವಯನಾದ ಆತ್ಮನು ಒಬ್ಬನೇ ಸತ್ಯವೆಂದೂ ಹಾಗೂ ಅದನ್ನೇ ಬೋಧಿಸಲಾಗುವುದೆಂದೂ ಶಿಷ್ಯನಿಗೆ ಆಶ್ವಾಸನೆಯನ್ನು ಕೊಟ್ಟಿದ್ದಾನೆ.

ಓ.ಸಂ.35 : ಶಿಷ್ಯನು ಒಂದುವೇಳೆ ದನ್ಯತಾಭಾವದಲ್ಲಿ ಉಳಿದಿದ್ದೇ ಆಗಿದ್ದಲ್ಲಿ ಆಗ ಗುರುವು ಮಾಡುವ ಯಾವ ಉಪದೇಶವೂ ಅವನ ಮನಸ್ಸಿನಲ್ಲಿ ಹೋಗುತ್ತಿರಲಿಲ್ಲ.

ವಿವರಣೆ : ಗುರುವು ಗಹನವಾದ ವೇದಾಂತ ವಿಷಯವನ್ನು ವಿವರಿಸುತ್ತಿರುವಾಗ ಶಿಷ್ಯನು ಸಮಾಧಾನಚಿತ್ತದಿಂದ ಅದನ್ನು ಆಲಿಸುವಂತಿರಬೇಕು. ಆದರೆ ಶಿಷ್ಯನು ಧನ್ಯತಾ ಭಾವದಿಂದ ಆನಂದದಲ್ಲಿ ಮುಳುಗಿಹೋಗಿದ್ದ ಸಂದರ್ಭದಲ್ಲಿ ಯಾವುದೇ ವಿಷಯವನ್ನು, ಅದರಲ್ಲೂ ಕ್ಲಿಷ್ಟವಾದ ವೇದಾಂತ ವಿಷಯವನ್ನು ಅರ್ಥಮಾಡಿಕೊಳ್ಳುವುದು ಅವನಿಂದ ಆಗುತ್ತಿರಲಿಲ್ಲ. ಭಾವನಾ ಪ್ರವಾಹವು ಹರಿಯುತ್ತಿರುವಾಗ ವಿಚಾರಕ್ಕೆ ಆಸ್ಪದವಿರುವುದಿಲ್ಲ. ಮನೋವೃತ್ತಿಯು ಆಂತರಿಕ ಅನುಭವವನ್ನು ಕೊಡುತ್ತಿರುವಾಗ ಬುದ್ಧಿ ವೃತ್ತಿಗೆ ಅವಕಾಶವಿರುವುದಿಲ್ಲ. ಆದುದರಿಂದ ಗುರುವು ಉದ್ದೇಶಪೂರ್ವಕವಾಗಿ ಶಿಷ್ಯನ ಮನಃಸ್ಥಿತಿಯನ್ನು ಬದಲಾಯಿಸಿದ್ದಾನೆ.

**ಓ.ಸಂ.36 :** ಗುರುವು ಶಿಷ್ಯನಿಗೆ ಹೇಳುವುದನ್ನು ಮುಂದುವರಿಸುತ್ತಾನೆ. ಗುರುವು ತಾನು ಹೇಳಿದ ಉಪದೇಶವು ವ್ಯರ್ಥವಾಗಬಾರದೆಂಬ ಉದ್ದೇಶದಿಂದ ಶಿಷ್ಯನಿಗೆ ಅವನನ್ನು ಕಾಲವು ತಿಂದು ಬಿಡುವುದೆಂದು ಹೆದರಿಸಲಾಯಿತು ಎಂದು ಸಮಾಧಾನ ಮಾಡಿದನು. ಇದನ್ನು ಕೇಳಿ ಶಿಷ್ಯನು ಕೃಪಾಳು ಗುರುವಿನ ಆಶಯದಂತೆಯೇ ನಡೆಯುವುದಾಗಿ ವಿನಮ್ರನಾಗಿ ನುಡಿದನು.

**ವಿವರಣೆ :** ಗುರುವು ತಾನು ಉಪದೇಶ ಮಾಡುವ ವೇಳೆಯಲ್ಲಿ ಶಿಷ್ಯನಿಂದ ಯಾವುದೇ ರೀತಿಯ ವಿಘ್ನವು ಉಂಟಾಗಬಾರದೆಂದು ಶಿಷ್ಯನಿಗೆ ಮೃತ್ಯುಭಯವನ್ನು ತೋರಿಸಿ ಅವನ ಮನಃಸ್ಥಿತಿಯನ್ನು ಬದಲಾಯಿಸುತ್ತಾನೆ. ನಂತರ ಶಿಷ್ಯನಿಗೆ ತಾನು ಏಕೆ ಹೀಗೆ ಮಾಡಬೇಕಾಯಿತು ಎಂಬುದನ್ನು ಅವನಿಗೆ ವಿವರಿಸಿ ಅವನ ಮನಃ ಸಮಾಧಾನವನ್ನು ಉಂಟು ಮಾಡುತ್ತಾನೆ. ಈಗ ಶಿಷ್ಯನು ಗುರುವಿನ ಉಪದೇಶವನ್ನು ಏಕಾಗ್ರತೆಯಿಂದ ಕೇಳಲು ಸಮರ್ಥನಾಗಿದ್ದು ಗುರುವಿನ ಯಾವುದೇ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸಲು ಸಿದ್ಧವಿರುವುದಾಗಿ ಹೇಳಿದನು.

ಇಲ್ಲಿ ಶಿಷ್ಯನನ್ನು ನಿಮಿತ್ತ ಮಾಡಿಕೊಂಡು ಶ್ರೀಗಳು ಸಾಧಕರಿಗೆ ಕಾಲನ ಬಗ್ಗೆ ಎಚ್ಚರಿಕೆಯ ಮಾತನ್ನು ಹೇಳುತ್ತಿದ್ದಾರೆ. ಪ್ರತಿಕ್ಷಣವೂ ನಮ್ಮ ಆಯುಷ್ಯವು ಕ್ಷೀಣಿಸುತ್ತಿದ್ದು ನಾವು ಮೃತ್ಯುವಿನ ಕಡೆಗೆ ಹೋಗುತ್ತಿರುವುದರಿಂದ ನಾವು ಕಾಲಹರಣ ಮಾಡಬಾರದೆಂಬ ಎಚ್ಚರಿಕೆಯನ್ನು ಕೊಡುತ್ತಿದ್ದಾರೆ.ಪ

**ಓ.ಸಂ.37 :** ಶ್ರೀ ಗುರುವು ಶಿಷ್ಯನಿಗೆ ಉಪದೇಶವನ್ನು ಪ್ರಾರಂಭಿಸುತ್ತಾನೆ. ನಿಷ್ಕಾಮ ಕರ್ಮಗಳಿಂದ ಚಿತ್ತವು ಶುದ್ಧವಾಗುತ್ತದೆ. ಚಿತ್ತದ ಏಕಾಗ್ರತೆಯನ್ನು ಸಾಧಿಸಲು ಉಪಾಸನೆಯನ್ನು ಮಾಡಬೇಕು.

**ವಿವರಣೆ :** ಮುಂದಿನ ಓವೀಯ ಪ್ರಥಮ ಚರಣವನ್ನು ಈ ಓವೀಗೆ ಸೇರಿಸಿಕೊಂಡು ವಿವರಿಸಲಾಗಿದೆ. ಈ ಓವೀಯಿಂದ ಎರಡನೆಯ ಅಧ್ಯಾಯದ ವಿಷಯದ ವಿವರಣೆಯು ಪ್ರಾರಂಭವಾಗುತ್ತದೆ. ಶ್ರೀ ಗುರುವು ಶಿಷ್ಯನಿಗೆ ಇಲ್ಲಿ ಮೊದಲು ಸಾಧಕನಿಗೆ ಚಿತ್ತ-ಶುದ್ಧಿಯನ್ನು

ಹಾಗೂ ಏಕಾಗ್ರತೆಯನ್ನು ಸಾಧಿಸಲು ಇರುವ ಮಾರ್ಗಗಳನ್ನು ಹೇಳಿದ್ದಾರೆ. ಚಿತ್ತ ಶುದ್ಧಿಯು ನಿಷ್ಕಾಮ ಕರ್ಮದ ಆಚರಣೆಯಿಂದ ಬರುತ್ತದೆ. ನಿತ್ಯ ಮತ್ತು ನೈಮಿತ್ತಿಕ ಕರ್ಮಗಳೇ ನಿಷ್ಕಾಮ ಕರ್ಮಗಳು. ಏಕೆಂದರೆ ಈ ಕರ್ಮಗಳಿಗೆ ಫಲವನ್ನು ಶಾಸ್ತ್ರವು ಹೇಳಿಲ್ಲ. ನಿತ್ಯ ಸಂಧ್ಯಾವಂದನೆ, ಭಗವಂತನ ಪೂಜೆ, ಮುಂತಾದುವುಗಳು ನಿತ್ಯ ಕರ್ಮಗಳಾಗಿವೆ. ಶ್ರಾದ್ಧ, ಹಬ್ಬ-ಹರಿದಿನಗಳು, ಸಂತರ ಆರಾಧನೆ, ಮುಂತಾದುವುಗಳು ನೈಮಿತ್ತಿಕ ಕರ್ಮಗಳಾಗಿವೆ. ಯಾವುದೇ ಕರ್ಮವನ್ನು ನಿಸ್ವಾರ್ಥದಿಂದ ಫಲಾಪೇಕ್ಷೆಯಿಲ್ಲದೆ ಮಾಡುವುದೇ ನಿಷ್ಕಾಮಕರ್ಮವಾಗಿದೆ. ಇದನ್ನೇ 'ಕರ್ಮಯೋಗ' ವೆಂದು ಭಗವದ್ಗೀತೆಯಲ್ಲಿ ವಿವರಿಸಲಾಗಿದೆ. ಇನ್ನು ಚಿತ್ತದ ಏಕಾಗ್ರತೆಗಾಗಿ ಶಾಸ್ತ್ರವು ಉಪಾಸನೆಯನ್ನು ಹೇಳಿದೆ. ಪರಮಾತ್ಮನ ಅಥವಾ ಶ್ರೀ ಗುರುವಿನ ಮೇಲೆ ನಿರಂತರ ಧ್ಯಾನ ಮಾಡುವುದು ಅಥವಾ ಭಕ್ತಿಯನ್ನು ತೋರಿಸುವುದೇ ಉಪಾಸನೆಯಾಗುತ್ತದೆ. ವಿಶೇಷವಾಗಿ 'ನವವಿಧ' ಭಕ್ತಿಯಿಂದಲೂ ಈ ಚಿತ್ತದ ಏಕಾಗ್ರತೆಯನ್ನು ಸಾಧಿಸಬಹುದು. ಜ್ಞಾನ ಸಂಪಾದನೆಗೆ ಚಿತ್ತದ ಶುದ್ಧಿ ಹಾಗೂ ಏಕಾಗ್ರತೆಗಳು ಆವಶ್ಯಕವಾಗಿವೆ.

**ಓ.ಸಂ.38 :** ಹೀಗೆ ಕರ್ಮೋಪಾಸನೆಗಳನ್ನುಮಾಡಿ ಚಿತ್ತದ ಶುದ್ಧಿ ಹಾಗೂ ಏಕಾಗ್ರತೆಯನ್ನು ಪಡೆದಿರುವ ಸಾಧಕನಲ್ಲಿ ಸಾಧನ ಚತುಷ್ಟಯಗಳು ತೋರತೊಡಗುತ್ತವೆ. ಇಂತಹವರು ಗುರುಮುಖೇನ ವೇದಾಂತ ಶ್ರವಣ ಮನನಗಳನ್ನು ಮಾಡುವುದರಿಂದ ಅವರಿಗೆ ವೇದಾಂತದ ಪರೋಕ್ಷ ಜ್ಞಾನವು ಲಭಿಸುತ್ತದೆ.

**ವಿವರಣೆ :** ಚಿತ್ತ ಶುದ್ಧಿ ಹಾಗೂ ಚಿತ್ತದ ಏಕಾಗ್ರತೆ ಉಂಟಾಗುವವರೆಗೆ ಕರ್ಮೋಪಾಸನೆಗಳನ್ನು ಮಾಡಬೇಕು. ಸಾಧಕನು ಇವುಗಳನ್ನು ನಿರಂತರವಾಗಿ ಮಾಡುವುದರಿಂದ ಅವನಲ್ಲಿ ವಿವೇಕ, ವೈರಾಗ್ಯ, ಶಮ ದಮಾದಿ ಷಟ್ ಸಂಪತ್ತುಗಳು ಮತ್ತು ಮುಮುಕ್ಷುತ್ವವೆಂಬ ನಾಲ್ಕು ಸಿದ್ಧಿಗಳು ತೋರುತ್ತವೆ. ಇವು ಇದ್ದರೆ ಅವುಗಳನ್ನು ಕರ್ಮೋಪಾಸನೆಗಳ ಫಲವೆಂದೇ ತಿಳಿಯಬೇಕು. ಹೀಗೆ ಸಾಧನ ಚತುಷ್ಟಯ ಸಂಪನ್ನನಾದ ಮೇಲೆ ಸಾಧಕನು ಒಬ್ಬ ಸದ್ಗುರುವಿನ ಬಳಿಸಾರಿ, ಗುರುಮುಖೇನ ಶ್ರವಣ-ಮನನಗಳನ್ನು ನಿರಂತರ ಮಾಡಿ ವೇದಾಂತದ ಬ್ರಹ್ಮಾತ್ಮೈಕ್ಯದ ಪರೋಕ್ಷ ಜ್ಞಾನವನ್ನು ಪಡೆಯುತ್ತಾನೆ. ಇಲ್ಲಿ

ಬಂದಿರುವ ಸಾಧನ ಚತುಷ್ಟಯಗಳ ಹಾಗೂ ಶ್ರವಣ-ಮನನಗಳ ವಿವರಣೆಯನ್ನು ಶ್ರೀಗಳೇ ಮುಂದೆ ಮಾಡಿರುತ್ತಾರೆ.

**ಓ.ಸಂ.39 :** ಇಂತಹ ಪರೋಕ್ಷ ಜ್ಞಾನವನ್ನು ಪಡೆದವನಿಗೆ ಅಪರೋಕ್ಷ ಜ್ಞಾನವಾಗಲೆಂದು ಆತ್ಮಾನುಭವವನ್ನು ಹೇಳಲಾರಂಭಿಸಲಾಗಿದೆ. ಆದುದರಿಂದ ಈ ಆತ್ಮಾನುಭವವನ್ನು ಪಡೆಯಲು ಪರೋಕ್ಷಜ್ಞಾನಿಯೇ ಉತ್ತಮ ಅಧಿಕಾರಿಯೆಂದು ತಿಳಿಯಬೇಕು.

**ವಿವರಣೆ :** ಸಾಮಾನ್ಯವಾಗಿ ಬ್ರಹ್ಮಜಿಜ್ಞಾಸೆಯನ್ನು ಮಾಡಲು ಅಂದರೆ ವೇದಾಂತದ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆಯಲು ಸಾಧನ-ಚತುಷ್ಟಯ ಸಂಪನ್ನನಾದವನಿಗೆ ಅಧಿಕಾರವು ಬರುತ್ತದೆ. ಆದರೆ ಇದರಿಂದ ಕೇವಲ ಪರೋಕ್ಷಜ್ಞಾನವು ಅಂದರೆ ಕೇವಲ ಶಬ್ದ-ಜ್ಞಾನವು ಮಾತ್ರ ಬರುತ್ತದೆ. ಇಂತಹ ಜ್ಞಾನದಿಂದ ಸಾಧಕನು ವೇದಾಂತದ ಮೇಲೆ ಪ್ರವಚನಗಳನ್ನು ಕೊಡಬಹುದು. ಆದರೆ ಅವನಿಗೆ ತಾನು ಸ್ವತಃ ಅದ್ವಯ ಬ್ರಹ್ಮನಿದ್ದೇನೆ ಎಂಬ ಅನುಭವವು ಆಗಿರುವುದಿಲ್ಲ. ಹಾಗೆ ಆಗಲಿಕ್ಕೆ ( ಅಪರೋಕ್ಷ ಜ್ಞಾನವನ್ನು ಪಡೆಯಲಿಕ್ಕಾಗಿಯೇ ) ಶ್ರೀಗಳು ಈ 'ಆತ್ಮಾನುಭವ'ವೆಂಬ ಗ್ರಂಥವನ್ನು ಬರೆದಿದ್ದಾರೆ. ಇದರಿಂದ ಪರೋಕ್ಷಜ್ಞಾನವನ್ನು ಪಡೆದ ಸಾಧಕನೇ ಈ ಗ್ರಂಥದ ಅಭ್ಯಾಸಮಾಡಲು ಯೋಗ್ಯ ಅಧಿಕಾರಿಯೆಂದು ತಿಳಿಯಬೇಕು.

**ಓ.ಸಂ.40 :** ಆದುದರಿಂದ ಸಾಧನ-ಚತುಷ್ಟಯ ಸಂಪನ್ನನಾದವನು ಗೌಣ ( ಅಮುಖ್ಯ ) ಅಧಿಕಾರಿಯಾಗುತ್ತಾನೆ. ಆದರೆ ಸದ್ಗುರುವು ಅಂಗೀಕರಿಸಿದ ಶಿಷ್ಯನಿಗೆ ಸಾಧನಗಳಿಲ್ಲದಿದ್ದರೂ ಅವನು ಯೋಗ್ಯ ಅಧಿಕಾರಿಯಾಗಿಯೇ ಆಗಿರುತ್ತಾನೆ.

**ವಿವರಣೆ :** ಹಿಂದಿನ ಓವೀಯಲ್ಲಿ ಸಾಧಕನು ಸಾಧನ ಚತುಷ್ಟಯ ಸಂಪನ್ನನಾದ ಮೇಲೆ ಪರೋಕ್ಷಜ್ಞಾನವನ್ನು ಪಡೆದಿರುವವನನ್ನೇ ಆತ್ಮನ ಅಪರೋಕ್ಷ ಜ್ಞಾನಕ್ಕೆ ಮುಖ್ಯ ಅಧಿಕಾರಿ ಎಂದು ತಿಳಿಸಲಾಗಿದೆ. ಇಲ್ಲಿ ಕೇವಲ ಸಾಧನ ಚತುಷ್ಟಯ ಸಂಪನ್ನನಾದವನನ್ನು ಗೌಣ ಅಥವಾ ಅಮುಖ್ಯ ಅಧಿಕಾರಿ ಎಂದು ಹೇಳಲಾಗಿದೆ. ಏಕೆಂದರೆ ಪರೋಕ್ಷ ಜ್ಞಾನವನ್ನು ಪಡೆಯುವುದೂ ಕೂಡ ಸುಲಭದ ಮಾತಲ್ಲ. ಅವನಿಗೆ ಶಾಸ್ತ್ರವು ಅಥವಾ ಗುರುಗಳು ಹೇಳಿದ ವಿಷಯವನ್ನು ತಿಳಿದುಕೊಳ್ಳುವುದು ಮತ್ತು ಸರಿಯೆಂದು ಒಪ್ಪುವುದು ಕಷ್ಟವಾಗುತ್ತದೆ. ಆದರೆ ಸಾಧಕನು ಗುರುಗಳನ್ನು ಸೇವಾ ಭಾವನೆಯಿಂದ ಹಾಗೂ ಅವರಲ್ಲಿ ಅತ್ಯಂತ ಭಕ್ತಿ ಶ್ರದ್ಧೆಗಳನ್ನಿಟ್ಟು ವಿನೀತ

ಭಾವದಿಂದ ನಡೆದುಕೊಂಡರೆ ಅಂತಹವನನ್ನು ಗುರುಗಳು ತಮ್ಮ ಶಿಷ್ಯನನ್ನಾಗಿ ಅಂಗೀಕರಿಸುತ್ತಾರೆ. ಅಂತಹವನಿಗೆ ಸಾಧನ ಚತುಷ್ಟಯಗಳು ಇಲ್ಲದಿದ್ದರೂ ಕೂಡ ಅವನು ಯೋಗ್ಯ ಅಧಿಕಾರಿಯೇ ಆಗಿರುತ್ತಾನೆ. ಏಕೆಂದರೆ ಅಂತಹವನಿಗೆ ಅಹಂಕಾರ ದೋಷವಿರುವುದಿಲ್ಲ.

ಓ.ಸಂ.41 : ಗುರುವು ಪ್ರಸನ್ನನಾಗದ ಹೊರತು ಸಾಧಕನ ಸಾಧನ-ಚತುಷ್ಟಯ ಸಂಪನ್ನತೆಯು ಉಪಯೋಗಕ್ಕೆ ಬರುವುದಿಲ್ಲ. ಏಕೆಂದರೆ ಗುರುಕೃಪೆಯೇ ಸಾಧಕನಿಗೆ ಮೋಕ್ಷ ಕೊಡುವಂತಹುದು ಆಗಿರುತ್ತದೆ. ಆದುದರಿಂದ ಗುರುಭಕ್ತನು ಕೂಡ ಜ್ಞಾನಕ್ಕೆ ಅಧಿಕಾರಿಯಾಗಿರುತ್ತಾನೆ.

ವಿವರಣೆ : ಹಿಂದಿನ ಓವೀಯಲ್ಲಿ ಸಾಧನ-ಚತುಷ್ಟಯ ಸಂಪನ್ನತೆಯು ಗೌಣವೆಂದು ಹೇಳಿದ್ದು ಅದರ ಕಾರಣವನ್ನು ಈ ಓವೀಯಲ್ಲಿ ತಿಳಿಸಲಾಗಿದೆ. ಗುರುಕೃಪೆಯಿಲ್ಲದೇ ಬ್ರಹ್ಮಾತ್ಮೈಕ್ಯ ಜ್ಞಾನವೂ ತನ್ಮೂಲಕ ಸಿಗುವ ಸದ್ಯೋಮುಕ್ತಿಯೂ ಸಿಗುವುದಿಲ್ಲವಾದ್ದರಿಂದ ಗುರುವಿನ ಪ್ರಸನ್ನತೆಯು ಅತ್ಯಂತ ಮುಖ್ಯವಾಗಿರುತ್ತದೆ. ಏಕೆಂದರೆ ಸಾಧಕನು ಬಹಿರ್ಮುಖವಾಗಿ ಪರತತ್ತ್ವವನ್ನು ಉಪಾಸ್ಯ ದೇವತೆಯಾಗಿ ಹುಡುಕುತ್ತಿರುತ್ತಾನೆ. ಅಂತಹವನನ್ನು ತನ್ನ ಒಳಗೆ ಹುಡುಕಹಚ್ಚಲು ಮತ್ತು ಆಗುವ ಆಂತರಿಕ ಅನುಭವದ ಸ್ವರೂಪವನ್ನು ತಿಳಿಸಲು ಬ್ರಹ್ಮಜ್ಞಾನಿಯಾದ ಗುರುವೇ ಬೇಕಾಗುತ್ತದೆ.

ಹಿಂದಿನ ಓವೀಯಲ್ಲಿ ತಿಳಿಸಿದಂತೆ ಈ ಸಾಧನಗಳು ಇಲ್ಲದಿದ್ದರೂ ಸಾಧಕನ ಗುರುಭಕ್ತಿಯನ್ನು ನೋಡಿ ಗುರುವು ಅವನ ಶಿಷ್ಯತ್ವವನ್ನು ಅಂಗೀಕರಿಸಿದರೆ, ಆಗ ಶಿಷ್ಯನಲ್ಲಿ ಅಹಂಕಾರವು ಇಲ್ಲದಿರುವುದರಿಂದ ಕ್ರಮೇಣ ಸಾಧನೆಗಳೂ ಕೂಡ ಅವಗತವಾಗಿ ಚಿತ್ತ ಶುದ್ಧಿಯೂ ಮತ್ತು ಬ್ರಹ್ಮ ಜ್ಞಾನವೂ ಬರುತ್ತದೆ. ಆದುದರಿಂದ ಗುರುಭಕ್ತನೂ ಜ್ಞಾನಕ್ಕೆ ಅಧಿಕಾರಿಯಾಗಿದ್ದಾನೆ. ಆದರೆ, ಗುರುವು ಸಾಧಕನಲ್ಲಿ ಎಷ್ಟರಮಟ್ಟಿಗೆ ನಿರಹಂಕಾರತ್ವವು ತಳವೂರಿದೆ ಎಂದು ನೋಡುತ್ತಾನೆಯೇ ವಿನಃ ಅವನ ಸಾಧನೆಗಳನ್ನಲ್ಲ. ಸಾಧಕನ ವಿನಯ, ಸೇವಾಭಾವ, ಭಕ್ತಿ ಶ್ರದ್ಧೆಗಳೇ ಅವನ ನಿರಹಂಕಾರತ್ವಕ್ಕೆ ಸಾಕ್ಷಿಯಾಗಿದ್ದು ಇದರಿಂದ ಗುರುವು ಪ್ರಸನ್ನನಾಗುತ್ತಾನೆ.

**ಓ.ಸಂ.42 :** ಲಕ್ಷ್ಮಿಯು ಪ್ರಸನ್ನಳಾದ ಭಿಕ್ಷುಕನಿಗೆ ಭಿಕ್ಷಾಟನೆ ಆವಶ್ಯಕವಿಲ್ಲ. ಹಾಗೆಯೇ ಸರಸ್ವತಿಯು ಒಲಿದವನಿಗೆ ಪುನಃ ಪಠಣವು ಬೇಡ.

**ವಿವರಣೆ :** ಗುರುವು ಶಿಷ್ಯನನ್ನು ಒಪ್ಪಿ ಅನುಗ್ರಹಿಸಿದ ಮೇಲೆ ಅವನಿಗೆ ಯಾವ ಸಾಧನೆಗಳೂ ಅವಶ್ಯಕವಿಲ್ಲ ಎಂದು ಸ್ಪಷ್ಟಪಡಿಸಲು ಶ್ರೀಗಳು ಈ ಓವೀಯಲ್ಲಿ ಸುಂದರವಾದ ಎರಡು ಉಪಮಾನಗಳನ್ನು ಕೊಟ್ಟಿದ್ದಾರೆ. ಐಶ್ವರ್ಯಕ್ಕೆ ಅಧಿದೇವತೆಯಾದ ಲಕ್ಷ್ಮಿಯು ಒಬ್ಬ ಭಿಕ್ಷುಕನಿಗೆ ಒಲಿದುಬಿಟ್ಟರೆ, ಅವನ ದಾರಿದ್ರ್ಯವು ದೂರವಾದಂತೆಯೇ ಸರಿ. ಅವನು ಪುನಃ ಭಿಕ್ಷೆ ಬೇಡುವ ಅವಶ್ಯಕತೆಯೇ ಬರುವುದಿಲ್ಲ. ಅದೇ ರೀತಿ ಸರಸ್ವತಿಯು ತನ್ನ ಭಕ್ತನಿಗೆ ಒಲಿದು ಪ್ರಸನ್ನಳಾದರೆ ಆಗ ಅವನಿಗೆ ಜ್ಞಾನ ಭಂಡಾರವೇ ತನ್ನದಾಗುವುದು. ಅಂತಹವನು ಜ್ಞಾನಾರ್ಜನೆಗೆ ಪುನಃ ಯಾವುದೇ ಗ್ರಂಥವನ್ನು ಓದುವ ಅವಶ್ಯಕತೆ ಇರುವುದಿಲ್ಲ.

**ಓ.ಸಂ.43 :** ಅದೇ ರೀತಿ ಯಾರಿಗೆ ಇಂದ್ರನು ಒಲಿದಿರುವನೋ ಅವನು ಸ್ವರ್ಗಕ್ಕೆ ಹೋಗಲು ಕರ್ಮಗಳನ್ನು ಮಾಡುವುದು ಅನವಶ್ಯಕವಾಗಿರುತ್ತದೆ. ಹೀಗೆ ಸದ್ಗುರುವಿನ ಅನುಗ್ರಹವಾದ ಶಿಷ್ಯನಿಗೆ ಯಾವುದೇ ಸಾಧನದ ಅವಶ್ಯಕತೆ ಇಲ್ಲ.

**ವಿವರಣೆ :** ಹಿಂದಿನ ಅಧ್ಯಾಯದಲ್ಲಿ ಕೊಟ್ಟ ಎರಡು ಉಪಮಾನಗಳಂತೆಯೇ ಕೊನೆಯದಾಗಿ ಒಂದು ಉಪಮಾನವನ್ನು ಕೊಟ್ಟು ವಿಷಯದ ಸಮಾರೋಪವನ್ನು ಮಾಡಲಾಗಿದೆ. ಜನರು ತಾವು ಸತ್ತ ಮೇಲೆ ಸ್ವರ್ಗವನ್ನು ಪಡೆಯಲು ಇಚ್ಛಿಸುತ್ತಾರೆ. ಸ್ವರ್ಗಕ್ಕೆ ಹೋಗಲು ಜ್ಯೋತಿಷ್ಟೋಮ ಯಾಗವನ್ನು ಮಾಡಬೇಕೆಂದು ಶಾಸ್ತ್ರವು ಹೇಳುತ್ತದೆ. ಈ ಯಾಗದಲ್ಲಿ ಹವಿಸ್ಸು ಹಾಕುವುದು ಇಂದ್ರ ದೇವನಿಗೆ. ಏಕೆಂದರೆ ಅವನೇ ಸ್ವರ್ಗಾಧಿಪತಿಯು ಆಗಿರುತ್ತಾನೆ. ಆದರೆ ಅತ್ಯಂತ ಐಶ್ವರ್ಯವಂತರು ಮಾತ್ರ ಈ ಯಾಗವನ್ನು ಮಾಡಬಹುದಾಗಿರುತ್ತದೆ. ಆದರೆ ಯಾರಿಗೆ ಸ್ವತಃ ಇಂದ್ರನೇ ಒಲಿದಿರುತ್ತಾನೋ ಅವನಿಗೇ ಈ ದುಬಾರಿ ಯಾಗವನ್ನು ಮಾಡುವ ಅವಶ್ಯಕತೆಯಿಲ್ಲದೇ ಸ್ವರ್ಗ ಪ್ರಾಪ್ತಿಯಾಗುತ್ತದೆ. ಹಾಗೆಯೇ ಸದ್ಗುರುವು ಅನುಗ್ರಹಿಸಿದ ಶಿಷ್ಯನಿಗೆ ಯಾವ ಸಾಧನವೂ ಇಲ್ಲದೇಇದ್ದರೂ ಅವನು ಗುರೋಪದೇಶಕ್ಕೆ ಅಧಿಕಾರಿಯೇ ಇರುತ್ತಾನೆ. ಸದ್ಗುರುವು ಸಾಧಕನ ನಿರಹಂಕಾರವನ್ನು ನೋಡಿ ಕೃಪೆಯಿಂದ ಅವನನ್ನು ಅಂಗೀಕರಿಸುತ್ತಾನೆ.

**ಓ.ಸಂ.44 :** ಇದನ್ನೆಲ್ಲ ಕೇಳಿದ ಶಿಷ್ಯನಿಗೆ ಗುರುವು ಈವರೆಗೆ ಶಿಷ್ಯನಿಗೆ ಇರಬೇಕಾದ ಅಧಿಕಾರದ ಬಗ್ಗೆ ಸಂಕ್ಷೇಪವಾಗಿ ತಿಳಿಸಿರುವುದನ್ನು ಕುರಿತು ತನಗೆ ಏನೂ ತಿಳಿಯಲಿಲ್ಲವೆಂದು ಸ್ಪಷ್ಟಪಡಿಸುತ್ತಾನೆ.

**ವಿವರಣೆ :** ಗುರುವು ಸಂಕ್ಷೇಪವಾಗಿ ಶಿಷ್ಯನಿಗೆ ಇರಬೇಕಾದ ಅಧಿಕಾರದ ಬಗ್ಗೆ ಸಂಕ್ಷೇಪವಾಗಿ ಸಕಲವನ್ನೂ ಹೇಳಿದರು ಕೂಡ ಶಿಷ್ಯನಿಗೆ ಅದನ್ನು ಸರಿಯಾಗಿ ಮಾಡಿಕೊಳ್ಳಲು ಕಷ್ಟವಾಗುತ್ತದೆ. ಅಧಿಕಾರಕ್ಕೆ ಇರಬೇಕಾದ ಅರ್ಹತೆಗಳು ಯಾವುವು ? ಈ ಅರ್ಹತೆಯನ್ನು ಪಡೆಯಲು ಶ್ರೀ ಗುರುವು ಶಿಷ್ಯನು ಚಿತ್ತ ಶುದ್ಧಿಯನ್ನು ಪಡೆಯಬೇಕೆಂದೂ, ಕರ್ಮಾನುಷ್ಠಾನವನ್ನು ತಪ್ಪಿಸಬಾರದೆಂದೂ, ವಿವೇಕಾದಿ ಸಾಧನ ಚತುಷ್ಟಯಗಳು ಇರಬೇಕೆಂದೂ, ಪರೋಕ್ಷ ಜ್ಞಾನವಿದ್ದವರೇ ನಿಜವಾದ ಅಧಿಕಾರಿಗಳೆಂದೂ, ಹಾಗೆಯೇ ಗುರುಕೃಪೆಯಿದ್ದಲ್ಲಿ ಯಾವ ಸಾಧನಗಳೂ ಬೇಡವೆಂದೂ, ಶ್ರೀ ಗುರುವು ಅನೇಕ ರೀತಿಯಲ್ಲಿ ಹೇಳಿದ್ದನ್ನು ಕೇಳಿ ಅವುಗಳಲ್ಲಿ ಒಂದಕ್ಕೊಂದು ಸಂಬಂಧವನ್ನು ತಿಳಿಯದೇ ತನಗೆ ಏನೂ ತಿಳಿಯಲಿಲ್ಲವೆಂದೂ ಗೊಂದಲವಾಗುತ್ತಿದೆ ಎಂದೂ ತನ್ನ ಗುರುವಿಗೆ ತಿಳಿಸುತ್ತಿದ್ದಾನೆ.

**ಓ.ಸಂ.45 :** ಗುರುಗಳು ಶಿಷ್ಯನಿಗೆ ಹೇಳುತ್ತಾರೆ. ಶಿಷ್ಯನು ಗುರುಗಳು ಹೇಳುವುದನ್ನು ಚಿತ್ತವನ್ನು ಸ್ಥಿರವಾಗಿಟ್ಟು ಕೇಳಬೇಕು. ಅಂತಃಕರಣದಲ್ಲಿ ಮೂರು ದೋಷಗಳು ಇರುವವರೆಗೆ ಸಾಧಕನಿಗೆ ಆತ್ಮನ ಜ್ಞಾನವು ಆಗುವಂತಿಲ್ಲ.

**ವಿವರಣೆ :** ಗುರುವು ಶಿಷ್ಯನ ಗೊಂದಲವನ್ನು ನಿವಾರಿಸಲು ಈ ಅಧ್ಯಾಯ ಪೂರ್ತಿ ಅಧಿಕಾರೀ ಲಕ್ಷಣಗಳನ್ನು ತಿಳಿಸಲು ಪ್ರಾರಂಭಿಸಿದ್ದಾನೆ. ಹಿಂದಿನ ಓವೀಯಲ್ಲಿ ಗುರುವು ಅನೇಕ ವಿಷಯಗಳನ್ನು ಅಂದರೆ ಸಾಧನೆಗಳನ್ನು ತಿಳಿಸಿದ್ದು ಅವುಗಳಲ್ಲಿ ಇರುವ ವ್ಯತ್ಯಾಸ ಹಾಗೂ ಸಂಬಂಧಗಳನ್ನು ಮತ್ತು ಪ್ರತಿಯೊಂದರಿಂದ ಆಗುವ ಪ್ರಯೋಜನವನ್ನು ಸ್ಪಷ್ಟವಾಗಿ ಶಿಷ್ಯನಿಗೆ ತಿಳಿಸಿ ಹೇಳಲು ಪ್ರಾರಂಭಿಸಿದ್ದಾನೆ. ಅದನ್ನು ಹೇಳುವ ಮೊದಲೇ ಅದಕ್ಕೆ ಹಿನ್ನೆಲೆಯಾಗಿ ಕೆಲವೊಂದು ಮುಖ್ಯವಾದ ವಿಷಯಗಳನ್ನು ಹೇಳಲು ಪ್ರಾರಂಭಿಸಿದ್ದಾನೆ. ಪ್ರತಿಯೊಬ್ಬನ ಅಂತಃಕರಣದಲ್ಲೂ ಮೂರು ದೋಷಗಳು ಇರುತ್ತವೆ. ಈ ದೋಷಗಳು ಇರುವವರೆಗೆ ಸಾಧಕನಿಗೆ ಆತ್ಮಜ್ಞಾನವು ಆಗುವಂತಿಲ್ಲ. ಈ ದೋಷಗಳನ್ನು ನಿವಾರಣೆ ಮಾಡುವುದೇ ಈ ಸಾಧನಗಳ ಉದ್ದೇಶವು ಆಗಿರುತ್ತದೆ.

**ಓ.ಸಂ.46 :** ಆ ಮೂರು ದೋಷಗಳು ಮಲ, ವಿಕ್ಷೇಪ ಮತ್ತು ಆವರಣಗಳಾಗಿವೆ. ಅವು ಅಂತಃಕರಣವನ್ನು ಆವರಿಸಿದ್ದು ಅದನ್ನು ಮಲಿನಗೊಳಿಸಿವೆ. ಇದನ್ನು ತಿಳಿದುಕೊಂಡು ಅವುಗಳ ನಿವಾರಣೆ ಮಾಡಿಕೊಳ್ಳಬೇಕಾಗಿದೆ.

**ವಿವರಣೆ :** ಈ ಓವೀಯಲ್ಲಿ ಅಂತಃಕರಣದಲ್ಲಿರುವ ಮೂರು ದೋಷಗಳ ಹೆಸರನ್ನು ತಿಳಿಸಿದ್ದಾರೆ. ಅವು ಮಲ, ವಿಕ್ಷೇಪ ಮತ್ತು ಆವರಣಗಳೇ ಆಗಿರುತ್ತವೆ. ಈ ಮೂರೂ ದೋಷಗಳು ಅಂತಃಕರಣವನ್ನು ಮಲಿನ ಮಾಡುವುದರಿಂದ 'ಜೀವ' ನು ತನ್ನನ್ನು ತಾನು ಆತ್ಮನೆಂದು ತಿಳಿಯಲಾರದೇ ತಪ್ಪಾಗಿ 'ದೇಹ' ವೆಂದು ತಿಳಿಯುವಂತಾಗಿದೆ. ಯಾವಾಗ ಈ ಮೂರೂ ದೋಷಗಳು ಅವುಗಳಿಗೆ ಪ್ರತ್ಯೇಕವಾಗಿ ಹೇಳಿರುವ ಸಾಧನಗಳಿಂದ ನಿವಾರಣೆಯಾಗುತ್ತವೆಯೋ ಆಗ ಅಂತಃಕರಣವು ಆತ್ಮನನ್ನು ಯಥಾರ್ಥವಾಗಿ ತಿಳಿಯಲು ಶಕ್ತವಾಗುತ್ತದೆ. ಇನ್ನು ಮುಂದೆ ವಿವರವಾಗಿ ಈ ದೋಷಗಳನ್ನು ಒಂದೊಂದೇ ಆಗಿ ತೆಗೆದುಕೊಂಡು ವಿಶದವಾಗಿ ವಿವರಿಸಲಾಗಿದೆ.

**ಓ.ಸಂ.47 :** ಆದಿಯಲ್ಲಿ ಜ್ಞಾನಾಜ್ಞಾನ ವಿಕಾರವಿಲ್ಲದ ಅದ್ವಯ ಸಚ್ಚಿದಾನಂದಪರಿಪೂರ್ಣ ಪರಬ್ರಹ್ಮನಲ್ಲಿ ಸತ್ಯತ್ವದಿಂದ ಇಲ್ಲದೇ ಇರುವ ಮಾಯಾದೇವಿಯು ವಾಸಿಸುತ್ತಾಳೆ.

**ವಿವರಣೆ :** ಪರಬ್ರಹ್ಮನು ( ಆತ್ಮನು ) ದೇಶ-ಕಾಲಗಳ ಪರಿಚ್ಛೇದವಿಲ್ಲದೇ ಮತ್ತು ಅವುಗಳಿಗೆ ಅತೀತನಾಗಿ ಹಾಗೂ ಅನಾದಿಯಾಗಿ ನಿರ್ವಿಕಾರನಾಗಿರುತ್ತಾನೆ. ಅಂದರೆ ಯಾವುದೇ ವೃತ್ತಿರೂಪವಾಗಿರುವ ಮತ್ತು ಉತ್ಪತ್ತಿ – ನಾಶಗಳನ್ನು ಹೊಂದುವ ಜ್ಞಾನಾಜ್ಞಾನಗಳು ಇರುವುದಿಲ್ಲ. ಅವನು ಅದ್ವಯನು, ನಿರ್ಗುಣನು, ನಿರ್ವಿಕಲ್ಪನು ಹಾಗೂ ಸಚ್ಚಿದಾನಂದ ಸ್ವರೂಪನಾಗಿದ್ದು ಪರಿಪೂರ್ಣವಾಗಿದ್ದಾನೆ. ಅವನಲ್ಲಿ ಸತ್ಯತ್ವದಿಂದ ಇಲ್ಲದೇ ಇರುವ ಅಂದರೆ ಪರಬ್ರಹ್ಮನ ( ಆತ್ಮನ ) ಅದ್ವಯ-ಸತ್ಯವನ್ನು ಮುಚ್ಚದೇ, ಅವನಿಗಿಂತ ಎರಡನೆಯದಲ್ಲದ, ಆದರೂ ಬ್ರಹ್ಮನಿಗಿಂತ ( ಆತ್ಮನಿಗಿಂತ ) ಭಿನ್ನವಾದ, ಅನಾದಿಯಾದ, ಮಾಯೆಯನ್ನುವುದಿತ್ತು ( 'ಯಾ' = ಯಾವುದು; 'ಮಾ' = ಇಲ್ಲವೋ – ಅದು ಮಾಯೆಯಾಗಿದೆ ). ಇದನ್ನು 'ದೇವೀ' ಎಂದೂ ಸಂಬೋಧಿಸಲಾಗಿದೆ. ಈ ಮಾಯಾ ತತ್ತ್ವದ ಹಿನ್ನೆಲೆಯಲ್ಲಿ ಪರಬ್ರಹ್ಮನೇ ಮಾಯಾಭಿಮಾನಿಯಾಗಿ 'ಈಶ್ವರ' ನೆಂದೆನಿಸಿಕೊಳ್ಳುತ್ತಾನೆ. ಈ 'ಈಶ್ವರ-ಮಾಯಾದೇವಿ'

ಯವರನ್ನೇ 'ಶಿವ-ಪಾರ್ವತಿ'ಯರನ್ನಾಗಿ ಇಲ್ಲವೇ 'ವಿಷ್ಣು-ಲಕ್ಷ್ಮಿ'ಯರನ್ನಾಗಿ ನೋಡಲಾಗಿದೆ. ಇದನ್ನೇ 'ಪುರುಷ-ಪ್ರಕೃತಿ' ಎಂದೂ ಕರೆಯುತ್ತಾರೆ. ಮುಂದೆ ಮಾಯೆಯ ಬಗ್ಗೆ ದೀರ್ಘವಾದ ವಿವರಣೆ ಇದೆ.

**ಓ.ಸಂ.48 :** ಮಾಯೆಯು 'ಸ್ವಶಕ್ತಿ' ಯಾಗಿರುತ್ತದೆ. ಮಾಯೆಯನ್ನು ಕೆಲವರು 'ಛಾಯಾ' ಎಂದೂ ಇನ್ನು ಕೆಲವರು 'ನಿಜಪ್ರಭೆ' ಎಂಬ ಹೆಸರನಿಂದಲೂ ಕರೆಯುತ್ತಾರೆ.

**ವಿವರಣೆ :** ಮಾಯೆಯು ಪರಬ್ರಹ್ಮನ ಅಧಿಷ್ಠಾನದಲ್ಲಿ ತಾನೇ ಇಡೀ ಜಗತ್ತನ್ನು ಸೃಷ್ಟಿಮಾಡುತ್ತದೆ. ಹಾಗೂ ಪ್ರಳಯಕಾರ್ಯದಲ್ಲಿ ಈ ಜಗತ್ತನ್ನು ನಾಶಮಾಡುತ್ತದೆ. ಆದುದರಿಂದ ಮಾಯೆಯಲ್ಲಿ 'ಸ್ವಶಕ್ತಿ' ಯಿರುತ್ತದೆ ಎನ್ನುತ್ತಾರೆ. ವಿದ್ಯುತ್ತು ಇರುವಾಗ ಹೇಗೆ ಬಲ್ಬು ಬೆಳಕನ್ನು ತಾನೇ ತಾನಾಗಿ ಕೊಡುತ್ತದೋ ಹಾಗೆಯೇ ಮಾಯೆಯು ಪರಬ್ರಹ್ಮನ ಅಧಿಷ್ಠಾನದಲ್ಲಿ ಜಗತ್ತಿನ ಸೃಷ್ಟಿ-ಸ್ಥಿತಿ-ಲಯ ಗಳನ್ನು ಮಾಡುತ್ತದೆ. ಪರಬ್ರಹ್ಮನನ್ನು ( ಆತ್ಮನನ್ನು ) ಅಜ್ಞಾನದಿಂದ ತಪ್ಪಾಗಿ ತಿಳಿದಾಗ ಅವನನ್ನೇ ಮಾಯೆಯೆಂದು ವ್ಯವಹರಿಸುತ್ತೇವೆ. ಹೀಗೆ ಪರಬ್ರಹ್ಮನಿಲ್ಲದೇ ಮಾಯೆಯು ಇರಲಾರದು. ಆದುದರಿಂದ ಮಾಯೆಯನ್ನು 'ಛಾಯಾ' ಅಥವಾ ಬ್ರಹ್ಮನ 'ನೆರಳು' ಎಂದು ಕೆಲವರು ಕರೆಯುತ್ತಾರೆ. ಇನ್ನು ಕೆಲವರು ಮಾಯೆಯನ್ನು 'ನಿಜಪ್ರಭೆ' ಎಂದೂ ಕರೆಯುತ್ತಾರೆ. ಏಕೆಂದರೆ ಬ್ರಹ್ಮನ ಚೈತನ್ಯವು ಮಾಯೆಯಲ್ಲಿ ಪ್ರತಿಫಲಿಸಿ ಅದರಿಂದ ಜೀವೋಪಾಧಿಗಳು ( ದೇಹಗಳು ) ಹಾಗೂ ಜಗತ್ತು ಸೃಷ್ಟಿಯಾಗಿವೆ. ಇದು ಸಮಷ್ಟಿ-ಸಾತ್ವಿಕ-ಬುದ್ಧಿವೃತ್ತಿಯಾಗಿದ್ದು 'ಶುದ್ಧ ಅರಿವು' ಆಗಿರುತ್ತದೆ. ಇದೇ 'ಜೀವ' ರಲ್ಲಿ 'ವೃತ್ತಿ ಅರಿವಿನ' ಮೂಲಕ ಭ್ರಮೆಯನ್ನು ಉಂಟುಮಾಡಲು ಕಾರಣವಾಗಿದೆ.

**ಓ.ಸಂ.49 :** ಮಾಯೆಯನ್ನು ಶುದ್ಧ 'ಸಂಕಲ್ಪ', 'ಮೂಲ ಪ್ರಕೃತಿ' ಹಾಗೂ 'ಅಜಾ' ಎಂದೂ ಕರೆಯುವರು. ಇದು ಕಾರ್ಯದ ಹಿನ್ನೆಲೆಯಲ್ಲಿ ಮಾತ್ರ ತೋರುವುದು. ಅಂದರೆ ಕಾರ್ಯವಿರದಿದ್ದರೆ ಇದು ತೋರುವುದಿಲ್ಲ.

**ವಿವರಣೆ :** ಮಾಯೆಯನ್ನು 'ಶುದ್ಧ ಸಂಕಲ್ಪ' ವೆಂದು ಕರೆಯುತ್ತಾರೆ. ಇಲ್ಲಿ 'ಸಂಕಲ್ಪ'ವೆಂದರೆ 'ವೃತ್ತಿ' ಎಂದು ಅರ್ಥ. ಇದು 'ಶುದ್ಧ-ಸಾತ್ವಿಕ-ವೃತ್ತಿ' ಯಾಗಿರುವುದರಿಂದ, ಇದರಿಂದ 'ಯಥಾರ್ಥ ಜ್ಞಾನ' ಉಂಟಾಗುತ್ತದೆ. ಮಾಯೆಯಿಂದ ಉಂಟಾಗುವ 'ಜೀವ' ರಲ್ಲಿ 'ಮಲಿನ-

ಸಾತ್ವಿಕ-ಅಂತಃಕರಣವೃತ್ತಿ' ಇರುವುದರಿಂದ ಹಾಗೂ ಜಗತ್ತನ್ನು ತಪ್ಪಾಗಿ ಸತ್ಯವೆಂದು ತಿಳಿಯುವುದರಿಂದ ಇದು 'ಅಯಥಾರ್ಥ ಜ್ಞಾನ' ವಾಗಿರುತ್ತದೆ. ಮಾಯೆಯನ್ನು 'ಮೂಲ ಪ್ರಕೃತಿ' ಎಂದೂ ಕರೆಯುತ್ತಾರೆ. ಏಕೆಂದರೆ ಇದು ಇಡೀ ಜಗತ್ತಿಗೂ ಹಾಗೂ ಸಕಲ 'ಜೀವ'ರ ದೇಹೋಪಾಧಿಗಳಿಗೂ ಮೂಲ ಕಾರಣವಾಗಿರುತ್ತದೆ. ಇದು ಯಾವುದೇ ರೀತಿಯಲ್ಲಿ ಸತ್ವ-ರಜ-ತಮೋ ಗುಣಗಳಿಂದ ವಿಂಗಡಣೆಯಾಗದೇ, ಇಂತಹದ್ದೆಂದು ಹೇಳಲು ಬಾರದ, ಮೂಲ ಜಡ-ಪ್ರಕೃತಿಯಾಗಿರುತ್ತದೆ. 'ಮಾಯೆ' ಯನ್ನು ಕೆಲವರು 'ಅಜಾ' ಎಂದೂ ಕರೆಯುತ್ತಾರೆ. 'ಅಜಾ' ಎಂದರೆ 'ಹುಟ್ಟು ಇಲ್ಲದಿರುವುದು' ಎಂದರ್ಥ. ಅಂದರೆ ಇದು 'ಅನಾದಿ' ಯಾಗಿದ್ದು ಇದರಿಂದ ಸೃಷ್ಟಿಯಾದ ಸ್ಥೂಲ-ಸೂಕ್ಷ್ಮವಾದ ಜಗತ್ತಿನಲ್ಲಿ 'ಕಾಲ'ದ ಹಾಗೂ 'ದೇಶದ' ಪ್ರಾರಂಭ ಆಗುತ್ತದೆ. ಹೀಗೆ 'ದೇಶ' ಹಾಗೂಮ 'ಕಾಲ'ಗಳ ಮಿತಿಗೆ ಸಿಕ್ಕು ನಾಶವಾಗುವ ಜಗತ್ತು ಅನಿತ್ಯವಾಗಿರುತ್ತದೆ. ಆದರೆ ಇದಕ್ಕೆ ಹೋಲಿಸಿದರೆ ಮಾಯೆಯು ನಿತ್ಯವಾಗಿರುತ್ತದೆ. ಇನ್ನು ಮಾಯೆಯು, ಕಾರ್ಯದ ಹಿನ್ನಲೆಯಲ್ಲಿ ಮಾತ್ರ ಸತ್ಯವೆಂದು ಕಾಣುತ್ತದೆ. ಅಂದರೆ ಯಾರಿಗೆ ಜಗತ್ತು ಸತ್ಯವೆಂದು ಭಾಸವಾಗುತ್ತದೋ ಅಂತಹವರಿಗೆ ಜಗತ್ತಿನ ಕಾರಣವಾದ ಮಾಯೆಯೂ ಸತ್ಯವೆಂದು ತೋರುತ್ತದೆ. ಆದರೆ ಯಾರಿಗೆ ಯಥಾರ್ಥ ಜ್ಞಾನದಿಂದ ಜಗತ್ತು ಸತ್ಯವಲ್ಲವೆಂದು 'ಜ್ಞಾನ' ಉಂಟಾಗುತ್ತದೋ ಅಂತಹವರಿಗೆ ಮಾಯೆಯು ಸತ್ಯವಾಗಿ ಇರುವುದಿಲ್ಲ. ಆದುದರಿಂದ ಮಾಯೆಯು ಜಗತ್ತಿನ ಸತ್ಯತ್ವಕ್ಕೆ 'ಸಾಪೇಕ್ಷ' ವಾಗಿರುತ್ತದೆ.

**ಓ.ಸಂ.50 :** ಬ್ರಹ್ಮನ ಅಧಿಷ್ಠಾನವಿಲ್ಲದೇ ಮಾಯೆಗೆ ಸ್ವತಂತ್ರವಾದ ಸತ್ತೆ ಇರುವುದಿಲ್ಲ. ಮಾಯಾ ಶಕ್ತಿಗೆ ತನ್ನ ಅಧಿಷ್ಠಾನವಾದ ಬ್ರಹ್ಮದ ಸತ್ತೆಯೇ ಇರುತ್ತದೆ. ಅಧಿಷ್ಠಾನವಾದ ಬ್ರಹ್ಮವೇ ಶಕ್ತಿ ಸ್ವರೂಪವಾಗಿದೆ ಎಂದು ಹೇಳಲು ಬರುವುದಿಲ್ಲ.

ವಿವರಣೆ : ಮಾಯಾ ಶಕ್ತಿಯು ಜಡ ಸ್ವರೂಪದ್ದಾಗಿದ್ದು ಅದು ತನ್ನನ್ನು ತಾನು ಇದ್ದೇನೆಂದು ತಿಳಿಯಲು ಸಾಧ್ಯವಿಲ್ಲ. ಅದು ಚೈತನ್ಯದಿಂದ ತಿಳಿಯಲ್ಪಟ್ಟಾಗಲೇ ಅದರ ಅಸ್ತಿತ್ವವು ಸಿದ್ಧವಾಗುತ್ತದೆ. ಚೈತನ್ಯ ಸ್ವರೂಪನಾದ ಬ್ರಹ್ಮನು ಮಾಯಾ ಶಕ್ತಿಗೆ ಅಧಿಷ್ಠಾನನಾಗಿದ್ದಾನೆ. ಮೊದಲು ಅಸತ್-ಜಡ-ದುಃಖ ಸ್ವರೂಪವಾಗಿರುವ ಮಾಯಾಶಕ್ತಿಯು ಬ್ರಹ್ಮನ ಚೈತನ್ಯದಿಂದ ಪ್ರಕಾಶಿತವಾಗುತ್ತಿದ್ದಂತೆಯೇ ಅದಕ್ಕೆ ಜೀವ ಬಂದಂತಾಗಿ ಅಸ್ತಿ-ಭಾತಿ-ಪ್ರಿಯ ಸ್ವರೂಪವಾಗಿ ತೋರತೊಡಗುತ್ತದೆ. ಇದು ಹೇಗೆ ಇಲ್ಲದ

ಹಾವು ಹಗ್ಗದ ಅಧಿಷ್ಠಾನದಲ್ಲಿ ತೋರುತ್ತದೆಯೋ ಹಾಗೆ. ಅಲ್ಲದೇ ಹೇಗೆ ಭ್ರಾಂತಿ-ಹಾವಿನ ಅಸ್ತಿತ್ವವು ಹಗ್ಗದ ಅಸ್ತಿತ್ವವೇ ಆಗಿರುತ್ತದೋ ಹಾಗೆಯೇ ಬ್ರಹ್ಮನ ಅಸ್ತಿತ್ವವೇ ಮಾಯಾ ಶಕ್ತಿಯ ಅಸ್ತಿತ್ವವಾಗಿರುತ್ತದೆ. ಆದರೂ ಭ್ರಾಂತಿ-ಹಾವು ಎಂದೂ ಹಗ್ಗವಾಗಲಾರದು. ಹಾಗೆಯೇ ಹಗ್ಗವು ಎಂದೂ ಭ್ರಾಂತಿ-ಹಾವಾಗಲಾರದು. ಅದೇ ರೀತಿ ಬ್ರಹ್ಮವು ಎಂದೂ ಮಾಯಾ ಶಕ್ತಿಯಾಗಲಾರದು. ಏಕೆಂದರೆ ಬ್ರಹ್ಮವು ಚೈತನ್ಯ ಸ್ವರೂಪವಿದ್ದರೆ ಅದಕ್ಕೆ ವಿರುದ್ಧವಾಗಿ ಮಾಯಾ ಶಕ್ತಿಯು ಜಡವಿರುತ್ತದೆ. ಮುಂದಿನ ಓವೀಗಳಲ್ಲಿ ಇದನ್ನು ಸ್ಪಷ್ಟಪಡಿಸಲಾಗಿದೆ.

**ಓ.ಸಂ.51 :** ಅಧಿಷ್ಠಾನವಾದ ಬ್ರಹ್ಮವು ( ಆತ್ಮವು ) ನಿತ್ಯವಿದ್ದು ಸ್ವಪ್ರಕಾಶದಿಂದ ಮಾಯಾಶಕ್ತಿಯನ್ನು ಬೆಳಗುತ್ತದೆ. ಈ ಅಧಿಷ್ಠಾನದ ಮೇಲೆ ಮಾಯಾ-ಶಕ್ತಿಯು ಉತ್ಪತ್ತಿ ನಾಶಗಳನ್ನು ಪಡೆಯುತ್ತದೆ. ಬ್ರಹ್ಮನಿಂದ ಬೆಳಗಲ್ಪಟ್ಟ ಮಾಯೆಯಿಂದ ಹೊರಬಂದ ಪ್ರತಿಫಲಿತ ಬೆಳಕು ಮಾಯಾಶಕ್ತಿಯ ನಿಜಪ್ರಕಾಶವಾಗಿರುತ್ತದೆ.

**ವಿವರಣೆ :** ಜಡ ಮಾಯಾ ಶಕ್ತಿಗೆ ಚೈತನ್ಯ ಸ್ವರೂಪದ ಆತ್ಮವು ( ಬ್ರಹ್ಮವು ) ಅಧಿಷ್ಠಾನವಾದರೂ ಬ್ರಹ್ಮವೇ ಮಾಯಾಶಕ್ತಿಯೆಂದು ಹೇಳಲು ಬರುವುದಿಲ್ಲ. ಬ್ರಹ್ಮವು ನಿತ್ಯವಾಗಿದ್ದು ತನ್ನ ಸ್ವರೂಪಗತವಾದ ಸ್ವಪ್ರಕಾಶದಿಂದ, ಇರುವುದೆಲ್ಲವನ್ನೂ, ಅಂದರೆ ಮಾಯಾ ಶಕ್ತಿಯನ್ನು ಪ್ರಕಾಶಿಸುತ್ತಾ ಅದರ ಇರುವನ್ನು ತಿಳಿಯುತ್ತದೆ. ಇದು, ಹೇಗೆ ದೀಪವು ಇರುವುದೆಲ್ಲವನ್ನೂ ಸ್ವಾಭಾವಿಕವಾಗಿ ಬೆಳಗುತ್ತದೋ ಹಾಗೆಯೇ ಇರುತ್ತದೆ. "ಘಟ ದ್ರಷ್ಟಾ ಘಟಾತ್ ಭಿನ್ನಃ" ಎಂಬಂತೆ ಸಕಲವನ್ನೂ ತಿಳಿಯುವ ಬ್ರಹ್ಮವು ( ಆತ್ಮವು ) ತಿಳಿಯಲ್ಪಡುವ ಮಾಯಾಶಕ್ತಿಗಿಂತ ಭಿನ್ನವಾಗಿರುತ್ತದೆ. ಮಾಯಾ-ಶಕ್ತಿಯು ಜಡವಾಗಿರುವುದರಿಂದ ವಿಕಾರವಾಗುವುದು ಹಾಗೂ ನಾಶವಾಗುವುದು ಅದರ ಸ್ವಭಾವವಾಗಿರುತ್ತದೆ. ಹೀಗೆ ನಾಶವಾದ ಮಾಯಾ ಶಕ್ತಿಯು ತನ್ನ ಮೂಲ ಸ್ವರೂಪದಲ್ಲಿ ಅಂದರೆ ಕಾರಣ ರೂಪವಾಗಿ ಮೂಲ ಪ್ರಕೃತಿಯಾಗಿರುತ್ತದೆ. ಹೀಗೆ ಸ್ವಶಕ್ತಿಯಿಂದಲೇ ಮಾಯೆಯು ತನ್ನ ಉತ್ಪತ್ತಿ ನಾಶಗಳನ್ನು ಆತ್ಮನ ಅಧಿಷ್ಠಾನದಲ್ಲಿ ಹೊಂದುತ್ತಿರುತ್ತದೆ. ಅಂದರೆ ಆತ್ಮನ ಬೆಳಕಿನಲ್ಲಿಯೇ ಮಾಯೆಯು ಜಗತ್ತಿನ ಸೃಷ್ಟಿ-ಸ್ಥಿತಿ-ಲಯ ( ಪ್ರಳಯ )ಗಳು ನಿತ್ಯ ನಡೆಯಲು ಕಾರಣವಾಗುತ್ತದೆ. ಆದುದರಿಂದ ಮಾಯೆಯ ಮೇಲೆ ಬ್ರಹ್ಮನಿಂದ ಪ್ರತಿಫಲಿಸಿದ ಬೆಳಕು ಇದಕ್ಕೆಲ್ಲ ಕಾರಣವಾಗಿರುವುದರಿಂದ ಅದು ಮಾಯಾ ಶಕ್ತಿಯ ನಿಜಪ್ರಕಾಶವೆಂದು ಹೇಳಬಹುದು. ಈ

ಕಾರಣಕ್ಕಾಗಿ ಮಾಯೆಯಲ್ಲಿರುವ ಜಡತ್ವ ಹಾಗೂ ಅನಿತ್ಯತ್ವಗಳು ಅದರ ಕಾರ್ಯವಾದ ಪ್ರಪಂಚದಲ್ಲೂ ಕಾಣಬಹುದು.

**ಓ.ಸಂ.52 :** ಮಾಯಾಶಕ್ತಿಗೆ ತನ್ನ ಅಧಿಷ್ಠಾನವಾದ ಆತ್ಮನನ್ನು ಪ್ರಕಾಶಿಸುವ ಸಾಮರ್ಥ್ಯವಿರುವುದಿಲ್ಲ. ಬ್ರಹ್ಮನು ( ಆತ್ಮನು ) ಆನಂದ ಸ್ವರೂಪನು. ಆದರೆ ಮಾಯೆಯು ವಿಕಾರಿಯು ಮತ್ತು ದುಃಖರೂಪವಾಗಿದೆ.

**ವಿವರಣೆ :** ಅಧಿಷ್ಠಾನವಾದ ಬ್ರಹ್ಮವು (ಆತ್ಮವು ) ಮಾಯಾಶಕ್ತಿಯನ್ನು ತನ್ನ ಚೈತನ್ಯದಿಂದ ಪ್ರಕಾಶಿಸುತ್ತದೆ. ಆದರೆ ಜಡ ಸ್ವರೂಪದ ಮಾಯೆಗೆ ತನ್ನ ಅಧಿಷ್ಠಾನವನ್ನು ಬೆಳಗುವ ಶಕ್ತಿಯಿಲ್ಲ. ಏಕೆಂದರೆ ಮಾಯೆಯು ಜಡ ಶಕ್ತಿಯಾಗಿರುತ್ತದೆ. ಎಲ್ಲ ಜಡದಂತೆ ಇದೂ ವಿಕಾರವಾಗುತ್ತದೆ. ಆದರೆ ಮಾಯೆಯು, ವಿಕಾರದಿಂದ ಅಂದರೆ ತನ್ನಲ್ಲೇ ಬದಲಾವಣೆಯಾಗಿ ಈ ಸೂಕ್ಷ್ಮ ಹಾಗೂ ಸ್ಥೂಲ ರೂಪದ ಪ್ರಪಂಚವಾಗಿ ಮಾರ್ಪಡುತ್ತದೆ. ಈ ಪ್ರಪಂಚದ ಪ್ರತಿಯೊಂದು ವಸ್ತುವೂ ವಿಕಾರವಾಗಿ ನಾಶವಾಗುವುದರಿಂದ ದುಃಖಕಾರಕವಾಗಿದೆ. ಹೀಗೆ ಮಾಯಾ ಶಕ್ತಿಯು ವಿಕಾರಿಯೂ ಮತ್ತು ದುಃಖಕಾರಕವೂ ಆಗಿರುತ್ತದೆ. ಆದರೆ ಬ್ರಹ್ಮನು ಅಥವಾ ಆತ್ಮನು ಸ್ವರೂಪತಃ ಸತ್-ಚಿತ್-ಆನಂದ ಸ್ವರೂಪನು. ಅಂದರೆ ಇರುವಂತೆ ಕಾಣುವ 'ಇರುವುದೆಲ್ಲದರ ಇರುವೆಲ್ಲ' ಇದರದೇ (ಬ್ರಹ್ಮನದೇ) ಅಗಿದ್ದು, ಅದು 'ನಿತ್ಯ ಏಕೈಕ ಇರುವು' ಆಗಿರುತ್ತದೆ (ಸತ್ ). ಅಲ್ಲದೇ ಸಕಲವನ್ನು ಬೆಳಗುವ ಶುದ್ಧ ಚೈತನ್ಯವಾಗಿರುತ್ತದೆ ( ಚಿತ್ ). ಹಾಗೂ ಎಲ್ಲ ಜೀವಿಗಳ ಸುಖದ ಆಧಾರವಾಗಿರುವ ಅನಂತ ಆನಂದ ಸ್ವರೂಪವಾಗಿರುತ್ತದೆ ( ಆನಂದ ).

**ಓ.ಸಂ.53 :** ಆದುದರಿಂದ ಬ್ರಹ್ಮ ( ಆತ್ಮ ) ವೇ ಮಾಯೆಯಲ್ಲ. ಆದರೆ ಆತ್ಮ (ಬ್ರಹ್ಮ) ನಿಲ್ಲದೇ ಮಾಯೆಗೆ ಅಸ್ತಿತ್ವವಿಲ್ಲ. ಆತ್ಮನ ಅಸ್ತಿತ್ವದ ಅಧಿಷ್ಠಾನದಲ್ಲೇ ಮಾಯೆಯು ತೋರಲು ಶಕ್ಯವಾಗುವುದು. ಆದುದರಿಂದ ಮಾಯೆಗೆ ತನ್ನದೇ ಆದ ( ಸ್ವತಂತ್ರವಾದ ) ಅಸ್ತಿತ್ವವಿಲ್ಲ.

**ವಿವರಣೆ :** ಆತ್ಮವು ಚೈತನ್ಯ ಸ್ವರೂಪದ್ದಾಗಿದೆ ಮತ್ತು ಮಾಯೆಯು ಜಡಸ್ವರೂಪದ್ದಾಗಿದೆ. ಆದುದರಿಂದ ಎರಡೂ ವಿರುದ್ಧ ತತ್ತ್ವಗಳಾಗಿದ್ದು, ಒಂದನ್ನು 'ಇನ್ನೊಂದು' ಎಂದು ತಪ್ಪು ತಿಳಿಯಲಿಕ್ಕೆ ಬರುವುದಿಲ್ಲ. ಅವೆರಡೂ ಪರಸ್ಪರ ಭಿನ್ನವಾಗಿವೆ. ಆದರೂ ಯಾರೂ ನೋಡದಿರುವ ಸರ್ವ ಜಗತ್ತಿಗೆ ಕಾರಣವಾದ ಮಾಯೆಯನ್ನು ಜಡವೆಂದು ಹೇಗೆ ಹೇಳಬಹುದು?

ಅಂದರೆ ಸರ್ವ ದೃಶ್ಯ ಜಗತ್ತು ಜಡವಿರುವುದರಿಂದ ಅದರ ಕಾರಣವಾದ ಮಾಯೆಯು ಮೂಲ ಪ್ರಕೃತಿಯ ರೂಪದಲ್ಲಿ ಅವ್ಯಾಕೃತವಿದ್ದರೂ ಕೂಡ ಅದು ಜಡವಿರಲೇಬೇಕೆಂದು ತರ್ಕದಿಂದ ಹೇಳಬಹುದು. ಇದು, ಬಂಗಾರದ ಆಭರಣಗಳು ಬಂಗಾರದಿಂದಲೇ ಹೇಗೆ ಮಾಡಿರಲೇಬೇಕೋ ಹಾಗೆ ಇದೆ. ಆದರೆ ಮಾಯೆಗೆ ತನ್ನದೇ ಆದ ಅಸ್ತಿತ್ವವಿಲ್ಲದೇ ಆತ್ಮನಿಂದಲೇ ಅದಕ್ಕೆ ಅಸ್ತಿತ್ವವು ಬರುವುದು. ಆತ್ಮನು, ಅಜ್ಞಾನದ ಪರಿಣಾಮವಾಗಿ 'ಜೀವ' ರೂಪದಿಂದ ಇರದೇ ಇದ್ದರೆ ಆಗ ದೃಶ್ಯ-ಪ್ರಪಂಚವೇ ಇರುವುದಿಲ್ಲ. ಹಾಗೆಯೇ ಪಂಚ ಇಂದ್ರಿಯಗಳಿಂದ ಜಡ ಜಗತ್ತನ್ನು ತಿಳಿಯುವುದರಿಂದ ಜಗತ್ತು ಪಂಚ ಇಂದ್ರಿಯಗಳ ವಿಷಯಗಳಾದ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧರೂಪವಾಗಿಯೇ ಕಾಣುತ್ತದೆ. ಅಂದರೆ ಆತ್ಮನ ಅರಿವಿನ ಮೇಲೆಯೇ ಬಾಹ್ಯ ಜಗತ್ತು ( ಮಾಯೆಯ ಕಾರ್ಯವು ) ತೋರುತ್ತದೆ. ಯಾವಾಗ 'ನಾನು ಆತ್ಮ' ನೆಂಬ ಜ್ಞಾನವು ಬರುತ್ತದೋ ಆಗ ಮಾಯೆಯು ಕಾರ್ಯಸಹಿತವಾಗಿ ನಾಶವಾಗುತ್ತದೆ. ಆದುದರಿಂದ ಜ್ಞಾನದಿಂದ ನಾಶವಾಗುವ ಮಾಯೆಯು ಅಜ್ಞಾನ ಸ್ವರೂಪವಾಗಿದೆ. ಹೀಗೆ ಸ್ವತಂತ್ರ ಅಸ್ತಿತ್ವವನ್ನು ಹೊಂದಿರದೇಇರುವ ಮಾಯೆಗೆ ತನ್ನದೇ ಆದ ಅಸ್ತಿತ್ವವಿಲ್ಲ. ಹೇಗೆ ಹಗ್ಗವೇ ಹಾವಾಗಿ ತೋರುತ್ತದೋ ಹಾಗೆಯೇ ಬ್ರಹ್ಮನೇ ಮಾಯೆಯಾಗಿ ತೋರುತ್ತಾನೆ.

**ಓ.ಸಂ.54 :** ಈ ರೀತಿ ತನ್ನದೇ ಆದ ಅಸ್ತಿತ್ವವು ಮಾಯೆಗೆ ಇರುವುದಿಲ್ಲ. 'ಜೀವ' ನ ಅಜ್ಞಾನವಿರುವತನಕ ಮಾಯೆಗೆ ಅಸ್ತಿತ್ವವಿರುತ್ತದೆ. ಸರ್ವಸಾಕ್ಷಿತ್ವವು ಉಂಟಾಗಲು ಈ ಮಾಯೆಯೇ ಕಾರಣವಾಗಿರುತ್ತದೆ.

**ವಿವರಣೆ :** ಹಿಂದಿನ ಓವೀಗಳಲ್ಲಿ ಆತ್ಮನೇ ಮಾಯೆಯಾಗಿ ತೋರುತ್ತಿರುವನೆಂದೂ, ಮಾಯೆಗೆ ತನ್ನದೇ ಆದ ಅಸ್ತಿತ್ವವಿಲ್ಲವೆಂದೂ ವಿವರಿಸಲಾಗಿದೆ. ಭ್ರಾಂತಿ-ಹಾವಿಗೆ ಹೇಗೆ ಹಗ್ಗವೇ ಅಧಿಷ್ಠಾನವೋ (ಅಂದರೆ ಭ್ರಾಂತಿ ಹಾವಿಗೆ ಹಗ್ಗವು ಹೇಗೆ ಕೊಡುವುದೋ) ಹಾಗೆಯೇ ಆತ್ಮನು ಮಾಯೆಗೆ ಆಶ್ರಯ ಕೊಡುತ್ತಾನೆ. ಇದರರ್ಥವು ಆತ್ಮನನ್ನು ಸರಿಯಾಗಿ ತಿಳಿಯದಿರುವುದೇ ಆಗಿದೆ, ಅಂದರೆ 'ಜೀವ'ನ ಅಜ್ಞಾನವೇ ಆತ್ಮನನ್ನು ತಪ್ಪಾಗಿ ಮಾಯೆಯೆಂದು ತಿಳಿಯಲು ಕಾರಣವಾಗಿದೆ. 'ಜೀವ' ನಿಗೆ ಆತ್ಮನ ಅಜ್ಞಾನವಿರುವತನಕ ಮಾತ್ರ ಮಾಯೆಗೆ ಅಸ್ತಿತ್ವವಿರುತ್ತದೆ. 'ಇದು ಹಗ್ಗ' ವೆಂದು ತಿಳಿಯದೇ ಇರುವ ( ಅಜ್ಞಾನ )

ತನಕ ಮಾತ್ರ 'ಭ್ರಾಂತಿ-ಹಾವು' ಅಸ್ತಿತ್ವವನ್ನು ಪಡೆಯುತ್ತದೆ. ಹಾಗೆಯೇ ಎಲ್ಲಿಯವರೆಗೆ ಆತ್ಮನ ಅಜ್ಞಾನವಿರುತ್ತದೋ ಅಲ್ಲಿಯವರೆಗೆ ನನ್ನನ್ನು ನಾನು ತಪ್ಪಾಗಿ 'ಈ ದೇಹ' ವೆಂದೂ, ನನ್ನ ಹೊರಗಡೆ ಈ ಜಡ ಜಗತ್ತು ನನ್ನಿಂದ ತಿಳಿಯಲ್ಪಡುವುದೆಂದೂ ತಪ್ಪಾಗಿ ಕಾಣುತ್ತಿರುತ್ತದೆ. ನನ್ನಂತೆ ಉಳಿದ ಅಸಂಖ್ಯಾತ 'ಜೀವ' ರ ಸೃಷ್ಟಿಯೂ ಏಕಕಾಲಕ್ಕೆ ಆಗಿ ಜ್ಞಾನದಿಂದಲೇ ಅವರೆಲ್ಲರೂ ನನ್ನಂತೆ ಜಗತ್ತನ್ನು ತಿಳಿಯುವರಾಗಿದ್ದಾರೆ. ಆತ್ಮನು ಹೀಗೆ ಜೀವ-ಜಗತ್ತುಗಳಿಗೆ ಅಸ್ತಿತ್ವವನ್ನು ಕೊಡುತ್ತಾನೆ. ಅಲ್ಲದೇ ಆತ್ಮನು ಜೀವ-ಜಗತ್ತುಗಳ ವ್ಯಾಪಾರವನ್ನು ನಿತ್ಯ ನಿರಪೇಕ್ಷವಾಗಿ ಬೆಳಗುತ್ತಾನೆ. ಅಂದರೆ ಸಾಕ್ಷಿಯಾಗಿ ಎಲ್ಲವನ್ನೂ ತಿಳಿಸುತ್ತಾನೆ. ಇದನ್ನು ಕನಸಿನ ಅವಸ್ಥೆಗೆ ಹೋಲಿಸಬಹುದು.

**ಓ.ಸಂ.55 :** ಈ ಮಾಯೆಯಲ್ಲಿ ಆತ್ಮನ ಪ್ರತಿಬಿಂಬವನ್ನು ಈಶ್ವರನೆಂದು ಕರೆಯುತ್ತಾರೆ. ಅವನನ್ನು ಸರ್ವಜ್ಞ, *ಸರ್ವಕರ್ತಾ, ಸರ್ವ ವ್ಯಾಪಕನೆಂದೂ ಮುಂತಾಗಿ* ಕರೆಯುತ್ತಾರೆ.

**ವಿವರಣೆ :** ಆತ್ಮನ ಚೈತನ್ಯವು ಮಾಯೆಯ ಮೇಲೆ ಬಿದ್ದ ತಕ್ಷಣ, ಅದು ಅಸ್ತಿ- ಭಾತಿ-ಪ್ರಿಯ ಸ್ವರೂಪದಿಂದ ಬೆಳಗಲು ಪ್ರಾರಂಭಿಸುತ್ತದೆ. ಮಾಯೆಯಲ್ಲಿರುವ ಸತ್ವ-ರಜ-ತಮೋ ಗುಣಗಳು ಜೀವವಿರುವಂತೆ ಸಕ್ರಿಯವಾಗುತ್ತವೆ ಮತ್ತು ಒಂದಕ್ಕೊಂದು ಮಿಶ್ರವಾಗಲು ಪ್ರಾರಂಭಿಸುತ್ತವೆ. ರಜ-ತಮೋ ಗುಣಗಳಿಲ್ಲದ ಶುದ್ಧ-ಸತ್ವದಲ್ಲಿ ಆತ್ಮನ ಪ್ರತಿಬಿಂಬವು ಬೀಳುತ್ತದೆ. ಆ ಪ್ರತಿಬಿಂಬವನ್ನೇ ಈಶ್ವರನೆನ್ನುತ್ತಾರೆ. ಮಾಯೆಯ ಮೂರು ಗುಣಗಳು ವಿವಿಧ ರೀತಿಯಲ್ಲಿ ಮಿಶ್ರವಾಗುತ್ತವೆ ಮತ್ತು ಇದರಿಂದ ಈ ಇಡೀ ಬ್ರಹ್ಮಾಂಡವು ಪಂಚ ಭೂತಾತ್ಮಕವಾದ ಸ್ಥೂಲ ಹಾಗೂ ಸೂಕ್ಷ್ಮ ರೂಪದಲ್ಲಿ ಸೃಷ್ಟಿಯಾಗಿರುತ್ತದೆ. ಸಾತ್ವಿಕ ಪ್ರಧಾನವಾದ ಸೂಕ್ಷ್ಮಭಾಗವು ಅನೇಕ ಅಂತಃಕರಣಗಳಾಗಿಯೂ ಹಾಗೂ ಸ್ಥೂಲಭಾಗವು ಅನೇಕ ಜಡವಸ್ತುಗಳಾಗಿಯೂ ಮಾರ್ಪಾಡಾಗುತ್ತವೆ. ಈಶ್ವರನಿಂದ ಬಂದ ಪ್ರತಿಫಲಿತ ಕಿರಣಗಳು ಈ ಅಂತಹಕರಣಗಳ ಮೇಲೆ ಬಿದ್ದು ಉಂಟಾಗುವ ಅಸಂಖ್ಯಾತ ಪ್ರತಿಬಿಂಬಗಳಿಗೆ 'ಜೀವ'ರು ಎನ್ನುತ್ತಾರೆ. ಪ್ರತಿಯೊಬ್ಬ 'ಜೀವ'ನೂ ತನ್ನ ಹಿಂದಿನ ಕಲ್ಪದಲ್ಲಿ ಸಂಚಿತವಾದ ವಾಸನೆಗಳು ಹಾಗೂ ಕರ್ಮಗಳಿಗೆ ಅನುಸರಿಸಿ ಭೋಗಿಸಲು ಸಮರ್ಥವಾದ ಆಯಾ ದೇಹಗಳನ್ನು ಪಡೆಯುತ್ತಾನೆ. ಈ 'ಜೀವ'ನು ತನ್ನ ದೇಹದ ಅಭಿಮಾನದಿಂದ ಅದರ ಸರ್ವ ಕ್ರಿಯೆಗಳು ತನ್ನವೆಂದೂ ತಿಳಿಯುತ್ತಾನೆ. ಈ ದೇಹದ ಕರಣಗಳಿಂದ ಜಗತ್ತನ್ನು ತಿಳಿಯುತ್ತಾನೆ ಮತ್ತು ಅದರ ಅಸಂಖ್ಯಾತ ವಿಷಯಗಳನ್ನು

ಭೋಗಿಸುತ್ತಾನೆ. ಈ ದೇಹವು ಅನೇಕ ಜನ್ಮಗಳಲ್ಲಿ ತನ್ನ ಕರ್ಮಗಳಿಗನುಸಾರವಾಗಿ ಜನ್ಮ-ಮರಣಗಳನ್ನು ಅನುಭವಿಸುತ್ತದೆ. ಹೀಗೆಯೇ ಈಶ್ವರನೂ ತನ್ನ ಸಮಷ್ಟಿ ಮಾಯೆಯ ಅಭಿಮಾನಿಯಾಗಿರುವುದರಿಂದ ಮಾಯೆಯೇ ಅವನ ಶಕ್ತಿಯಾಗುತ್ತದೆ. ಮಾಯೆಯ ಸರ್ವಕ್ರಿಯೆಗಳಿಗೂ 'ಜೀವ'ರೂ ಸೇರಿಕೊಂಡಂತೆ ಈಶ್ವರನು ಅಧಿಷ್ಠಾನನಾಗಿ, ಅವುಗಳ ಜ್ಞಾತೃವಾಗಿ ಅಂದರೆ ಸರ್ವಸಾಕ್ಷಿಯಾಗಿ ಸರ್ವಜ್ಞನೆನಿಸಿಕೊಳ್ಳುತ್ತಾನೆ. ಹಾಗೆಯೇ ಎಲ್ಲ ಕ್ರಿಯೆಗಳ ಕರ್ತೃವಾಗಿ 'ಸರ್ವಕರ್ತ' ನೆಂದೂ, ಅನಂತಗುಣಗಣಕೋಟಿ ಬ್ರಹ್ಮಾಂಡ ನಾಯಕನೆಂದೂ ವ್ಯಾವಹಾರಿಕವಾಗಿ ಅನಿಸಿಕೊಳ್ಳುತ್ತಾನೆ. ಆದರೆ ಈಶನ ಹಾಗೂ 'ಜೀವ'ರ ಜ್ಞಾತೃತ್ವ, ಕರ್ತೃತ್ವ ಹಾಗೂ ಭೋಕ್ತೃತ್ವಗಳು ಅವರ ಮೇಲೆಯೇ 'ಜೀವ'ರ ಅಜ್ಞಾನದಿಂದ ಆರೋಪಿಸಲ್ಪಟ್ಟಿರುತ್ತವೆ. ಈ ಅಜ್ಞಾನವು ಜ್ಞಾನದಿಂದ ನಾಶವಾದರೆ ಮಾಯೆಯೂ ತನ್ನ ಕಾರ್ಯ ಸಮೇತ ನಾಶವಾಗುತ್ತದೆ (ಓವೀ 54). ಈ 'ಅಜ್ಞಾನ' ಅಥವಾ 'ಅವಿದ್ಯೆ'ಯ ಬಗ್ಗೆ ಮುಂದಿನ ಓವೀಗಳಲ್ಲಿ ವಿವರಿಸಲಾಗಿದೆ.

**ಓ.ಸಂ.56 :** 'ಜೀವ' ರ ಅವಿದ್ಯೆಯು ಅನಾದಿಯೂ ಮತ್ತು ಅನಿರ್ವಚನೀಯವೂ ಆಗಿರುತ್ತದೆ. ಅದು ಆತ್ಮನನ್ನು ಆವರಿಸುವ ಕಾರಣದಿಂದ ತಾನೇ ಕಾರ್ಯರೂಪದಲ್ಲಿ ವಿಸ್ತಾರವಾಗಿರುತ್ತದೆ.

**ವಿವರಣೆ :** ಈ ಓವೀಯಲ್ಲಿ ಅವಿದ್ಯೆಯ ಸ್ವರೂಪವನ್ನು ತಿಳಿಸಲಾಗಿದೆ. ಈ ವರೆಗೆ ಮಾಯೆಯ ಸ್ವರೂಪವನ್ನು ವಿವರಿಸಿ ಇನ್ನು ಮೇಲೆ ದೀರ್ಘವಾಗಿ ಅವಿದ್ಯೆಯ ಬಗ್ಗೆ ವಿವರವಾಗಿ ತಿಳಿಸಲಾಗಿದೆ. ಈಶನ ಹಿನ್ನೆಲೆಯಲ್ಲಿ ಮಾಯೆಯನ್ನು ಈಶ್ವರನ ಸಮಷ್ಟಿ ಉಪಾಧಿಯೆಂದೂ ಸಕಲ ಜೀವ-ಜಗತ್ತಿಗೆ ಕಾರಣವೆಂದೂ ವಿವರಿಸಲಾಗಿತ್ತು. ಈಗ 'ಜೀವ'ನ ಹಿನ್ನೆಲೆಯಲ್ಲಿ ಅವಿದ್ಯೆಯು 'ಜೀವ' ನ ವ್ಯಷ್ಟಿ ಉಪಾಧಿಯಾಗಿದ್ದು ಕಾರ್ಯರೂಪದ ಸಕಲ ಜೀವ-ಜಗತ್ತುಗಳಿಗೆ ಕಾರಣವೆಂದು ಹೇಳಲಾಗಿದೆ. ಈ ಅವಿದ್ಯೆಯು ಮಾಯೆಯಂತೆ ಅನಾದಿಯೂ, ಅನಿರ್ವಚನೀಯವೂ ಆಗಿರುತ್ತದೆ. ಇದು ದೇಶ ಕಾಲಗಳಿಗೇ ಮೂಲವಾಗಿದ್ದು ಇದನ್ನು ಅನಾದಿ ಎಂದು ಕರೆಯಲಾಗಿದೆ. ಏಕೆಂದರೆ ಇದು 'ಜೀವ' ನ ಜಾಗ್ರತಾದಿ ಮೂರು ಅವಸ್ಥೆಗಳನ್ನು ಸೃಷ್ಟಿಸಿ ಅವುಗಳಲ್ಲಿ ದೇಶ-ಕಾಲ-ಜೀವ-ಜಗತ್ತುಗಳ ಉತ್ಪತ್ತಿ-ನಾಶಗಳನ್ನು ಪಡೆಯುತ್ತದೆ. ಹಾಗೆಯೇ ಇದನ್ನು ಆತ್ಮನಂತೆ ನಿತ್ಯ-ಸತ್ಯವೆಂದಾಗಲೀ ಇಲ್ಲವೇ ಎಂದೂ ತೋರದಿರುವ

ಬಂಜೆಯ ಮಗನಂತೆ ಅಸತ್ಯವೆಂದಾಗಲೀ ಹೇಳಲು ಬರುವುದಿಲ್ಲವಾದ್ದರಿಂದ ಅದನ್ನು 'ವಿವರಿಸಲಿಕ್ಕೆ ಬಾರದಿರುವಂತಹುದು' ಅಂದರೆ ಅನಿರ್ವಚನೀಯವಾಗಿದೆ ಎಂದು ಹೇಳಲಾಗಿದೆ.

**ಓ.ಸಂ.57 :** 'ಜೀವ' ನು ತನ್ನನ್ನು ತಾನು ತಿಳಿದುಕೊಳ್ಳದೇ ಇರುವುದೇ ಅವಿದ್ಯೆಯ (ಅಜ್ಞಾನದ ) ಲಕ್ಷಣವಾಗಿದೆ. ಆತ್ಮನೇ ಇದಕ್ಕೆ ಆಶ್ರಯವೂ ಮತ್ತು ವಿಷಯವೂ ಆಗಿದೆ.

**ವಿವರಣೆ :** 'ಜೀವ' ನು ತನ್ನ ನಿಜ ಸ್ವರೂಪವನ್ನು ಯಾವುದೆಂದು ಅವಿದ್ಯೆಯಿಂದಲೇ ತಿಳಿಯಲು ಅಸಮರ್ಥನಿರುತ್ತಾನೆ. ಅಂದರೆ ತಾನು ಆತ್ಮನೆಂಬುದನ್ನು ಮರೆತು ತನ್ನನ್ನು ದೇಹವೆಂದು ತಪ್ಪಾಗಿ ತಿಳಿದುಕೊಂಡಿದ್ದಾನೆ. ಅವಿದ್ಯೆಯು ಅಂದರೆ ಅಜ್ಞಾನವು ಯಾವಾಗ ನಾನು 'ಆತ್ಮ' ನಿದ್ದೇನೆ ಎಂಬುವ ಜ್ಞಾನದಿಂದ ಬಾಧಿತಗೊಳ್ಳುತ್ತದೋ ಆಗ ತನ್ನ ದೇಹ ಸಹಿತವಾದ ತನ್ನ ಇಡೀ ಜಗತ್ತು ಸ್ವಪ್ನದಂತೆ ಮಿಥ್ಯೆಯೆಂದು 'ಜೀವ'ನಿಗೆ ಅರಿವಾಗುತ್ತದೆ. ಅಲ್ಲಿಯವರೆಗೂ ಅವಿದ್ಯೆಯಿಂದ 'ಜೀವ'ನು ಮಾಡುವ ಪ್ರತಿ ವಿಚಾರ, ಭಾವನೆ ಹಾಗೂ ಕ್ರಿಯೆಗಳಿಗೆಲ್ಲಕ್ಕೂ ಆತ್ಮನೇ ಆಶ್ರಯನಾಗಿದ್ದಾನೆ. ಅಂದರೆ ಆತ್ಮನ ಅರಿವಿನ ಆಶ್ರಯವಿಲ್ಲದೇ 'ಜೀವ' ನ ಯಾವುದೇ ವೃತ್ತಿಯು ( ಇಲ್ಲವೇ ಕ್ರಿಯೆಯು ) ಅಸ್ತಿತ್ವವನ್ನು ಹೊಂದಿರುವುದಿಲ್ಲ. ಇದು ಹೇಗೆ ಭ್ರಾಂತಿಯ ಹಾವಿಗೆ ಹಗ್ಗದ ಆಶ್ರಯ ಬೇಕಾಗುತ್ತದೋ ಹಾಗೆ ಇರುತ್ತದೆ. ಹಾಗೆಯೇ 'ಜೀವ' ನ ಅವಿದ್ಯೆಗೆ ಅಂದರೆ 'ಜೀವ' ನ ಅವಿದ್ಯಾಕೃತವಾದ ಸಕಲ ಜ್ಞಾನ ಭಾಂಡಾರಕ್ಕೆ ಆತ್ಮನೇ ವಿಷಯನಾಗಿದ್ದಾನೆ. ಅಂದರೆ 'ಜೀವ' ನು ವ್ಯವಹಾರದಲ್ಲಿ ತಿಳಿಯುವ ಸಕಲ ವಿಷಯವೂ ಆತ್ಮನೇ ಆಗಿದ್ದು ಅವನು ತಪ್ಪಾಗಿ ಅದನ್ನು ಜಡವಾದ 'ಇನ್ನೊಂದು' ಎಂದು ತಿಳಿಯುತ್ತಿದ್ದಾನೆ. ಆದುದರಿಂದ ಅವಿದ್ಯೆಗೆ ಆತ್ಮನು ಆಶ್ರಯವೂ ಹಾಗೂ ವಿಷಯವೂ ಆಗಿರುತ್ತಾನೆ.

**ಓ.ಸಂ.58 :** ಅವಿದ್ಯೆಯು ಜಡ ಸ್ವರೂಪದ್ದಾಗಿರುವುದರಿಂದ ಅದು ತನ್ನನ್ನು ತಾನು ಇದ್ದೇನೆಂದು ತಿಳಿಯದೇ ಅದರ ಅಸ್ತಿತ್ವವು ಸಿದ್ಧವಾಗುವಂತಿಲ್ಲ. ಆದುದರಿಂದ ಸಾಕ್ಷಿಸ್ವರೂಪದ ಆತ್ಮನು ಇದನ್ನು ತಿಳಿಯಬಲ್ಲವನಾದ್ದರಿಂದ ಅವನಿಂದ ಅವಿದ್ಯೆಯ ಅಸ್ತಿತ್ವವು ಸಿದ್ಧವಾಗುತ್ತದೆ.

**ವಿವರಣೆ :** ಯಾವುದೇ ಜಡವು ತನ್ನನ್ನು ತಾನು ತಿಳಿಯದು. ಒಂದು ಜಡವಸ್ತುವನ್ನು ಯಾರೂ ತಿಳಿಯದೇ ಅದು ಇದ್ದಲ್ಲೇ ಇದ್ದುಕೊಂಡಿದ್ದರೆ 'ಅಸ್ತಿತ್ವದಲ್ಲಿದೆ' ಎಂದು ಅದನ್ನು ಯಾರೂ ಹೇಳಲಾರರು. ಆದುದರಿಂದ ಯಾವುದೇ ಜಡವನ್ನು 'ಇದೆ' ಎಂದು ಸಿದ್ಧಮಾಡಲು ಯಾರಾದರೂ ಅದನ್ನು ತಿಳಿಯಲು ಇರಲೇಬೇಕಾಗುತ್ತದೆ. ಆದುದರಿಂದ ಜಡದ ಅಸ್ತಿತ್ವವನ್ನು ತಿಳಿಯಲು ಚೈತನ್ಯವಿರಲೇಬೇಕು. ಅದ್ವಯ ಆತ್ಮನನ್ನು ತಿಳಿಯದಿರುವುದೇ ಅವಿದ್ಯೆ. ಈ ಆತ್ಮದ ಅಜ್ಞಾನ ( ಅವಿದ್ಯೆ ) ದಿಂದಲೇ ಜಡವಾದ 'ದೇಹೋಽಹಂ' ಭಾವವು ಮತ್ತು ಅದರಿಂದ ಉಂಟಾದ 'ಜೀವ'ನ ಉಪಾಧಿಯಾದ ದೇಹ ಮತ್ತು ಜಗತ್ತುಗಳು ಆತ್ಮನ ಬದಲಾಗಿ ತೋರುತ್ತಿವೆ. ಅಂದರೆ ಕಾರ್ಯರೂಪದ ಜಡವನ್ನು ಸೃಷ್ಟಿಮಾಡುವ ಅವಿದ್ಯೆಯು ಜಡವಿರಲೇಬೇಕು.

**ಓ.ಸಂ.59 :** ಹೀಗೆ ಸಾಕ್ಷಿಯು ಅವಿದ್ಯೆಯನ್ನು ತಿಳಿಯುವುದರಿಂದ ಅವಿದ್ಯೆಯ ಅಸ್ತಿತ್ವವು ಸಿದ್ಧವಾಗುತ್ತದೆ. ದೀಪವು ಯಾವ ಕ್ರಿಯೆಯಿಲ್ಲದೇ ಘಟವನ್ನು ಪ್ರಕಾಶಿಸುತ್ತದೆ. ಅದರಂತೆ ಅದ್ವಯನಾದ ಹಾಗೂ ಸ್ವಪ್ರಕಾಶನಾದ ಆತ್ಮನು ( ಸಾಕ್ಷಿಯು ) ಯಾವ ಕರ್ತೃತ್ವವಿಲ್ಲದೆಯೇ ಅವಿದ್ಯೆಯನ್ನು ತಿಳಿಯುತ್ತಾನೆ.

**ವಿವರಣೆ :** ಹಿಂದಿನ ಓವೀಯಲ್ಲಿ ಆತ್ಮನು ( ಸಾಕ್ಷಿಯು ) ಅವಿದ್ಯೆಯನ್ನು ನಿತ್ಯ ಪ್ರಕಾಶಿಸುತ್ತಾನೆಂದೂ ಅದರಿಂದ ಅವಿದ್ಯೆಯ ಅಸ್ತಿತ್ವವು ಸಿದ್ಧವಾಗುತ್ತದೆಯೆಂದೂ ತಿಳಿಸಲಾಗಿದೆ. ಈ ಓವೀಯಲ್ಲಿ ಸಾಕ್ಷಿಯು ಜಡವನ್ನು ನಿತ್ಯ ತಿಳಿಯುತ್ತಿರುವುದು ಅದೊಂದು ಕ್ರಿಯೆಯಲ್ಲವೆಂದು ತಿಳಿಸಲಾಗಿದೆ. ಇದನ್ನು ವಿವರಿಸಲು ಒಂದು ಸುಂದರ ಉಪಮಾನವನ್ನು ಕೊಡಲಾಗಿದೆ. ದೀಪವು ತನ್ನ ಎದುರಿಗಿರುವ ಜಡವನ್ನೆಲ್ಲ ಬೆಳಗಿ ಅವುಗಳನ್ನು ತಿಳಿಯಲು ಸಹಾಯ ಮಾಡುತ್ತದೆ. ಅಂದ ಮಾತ್ರಕ್ಕೆ ಅದಕ್ಕೊಂದು ಬೆಳಗುವ ಕ್ರಿಯೆಯಿದೆ ಎಂದು ಅದಕ್ಕೆ ಯಾರೂ ಕರ್ತೃತ್ವವನ್ನು ಆರೋಪ ಮಾಡುವುದಿಲ್ಲ. ದೀಪವು ಎದುರಿಗಿರುವ ಗಡಿಗೆಯನ್ನು ಬೆಳಗುವುದರಿಂದಲೇ ಆದನ್ನು ತಿಳಿಯಲು ಸಹಾಯವಾಗಬಹುದು. ಆದರೆ ದೀಪಕ್ಕೆ ಬೆಳಗುವುದೇ ಅದರ ಸ್ವಭಾವವಾಗಿರುತ್ತದೆ. ದೀಪಕ್ಕೆ ಗಡಿಗೆಯನ್ನು ಬೆಳಗಬೇಕೆಂಬ ಯಾವ ಉದ್ದೇಶವೂ ಇರುವುದಿಲ್ಲ. ಅದು ಸ್ವಾಭಾವಿಕವಾಗಿಯೇ ಎಲ್ಲವನ್ನೂ ಬೆಳಗುವಂತೆ ಗಡಿಗೆಯನ್ನೂ ಬೆಳಗಿದೆ. ಅದಕ್ಕೆ ಯಾವುದೇ ಕ್ರಿಯೆಯು ಹೇಗಿಲ್ಲವೋ ಹಾಗೆಯೇ ಆತ್ಮನು

ಎಲ್ಲವನ್ನೂ ಬೆಳಗುವಂತೆ ಅವಿದ್ಯೆಯನ್ನೂ ಬೆಳಗಿದ್ದಾನೆ. ಇದೊಂದು ಆತ್ಮನ ಕ್ರಿಯೆಯಾಗಲೀ ಅಥವಾ ಕರ್ತೃತ್ವ ಇದೆ ಎಂದಾಗಲೀ ತಿಳಿಯಬಾರದು.

ಓ.ಸಂ.60 : ಆದರೆ ನಾವು ಪ್ರಕಾಶಿಸುವ ಕ್ರಿಯೆಯನ್ನು ದೀಪದ ಮೇಲೆ ಆರೋಪಿಸುತ್ತೇವೆ. ಹಾಗೆಯೇ ನಿಷ್ಕ್ರಿಯನೂ ಹಾಗೂ ನಿತ್ಯ-ನಿರ್ಮಲನೂ ಆದ ಶುದ್ಧ ಆತ್ಮನ ಮೇಲೆ ಪ್ರಕಾಶಿಸುವ ಕ್ರಿಯೆಯನ್ನು ಆರೋಪಿಸಿ ಅವನನ್ನು ನಿಶ್ಚಯವಾಗಿ ಕರ್ತೃವನ್ನಾಗಿ ಮಾಡಿದ್ದೇವೆ.

ವಿವರಣೆ : ಹಿಂದಿನ ಓವೀಯಲ್ಲಿ ಆತ್ಮನು ಕೂಡ ದೀಪದಂತೆ, ಬೆಳಗುವ ಕ್ರಿಯೆಯಿಲ್ಲದೆಯೇ ಉಳಿದ ಜಡ ವಸ್ತುಗಳನ್ನು ಬೆಳಗುತ್ತಾನೆ ಎಂದು ತಿಳಿಸಲಾಗಿದೆ. ಇಲ್ಲಿ ಈ 'ಬೆಳಗುವ ಕ್ರಿಯೆ' ಯನ್ನು ದೀಪದ ಮೇಲೆ ಹಾಗೂ ಆತ್ಮನ ಮೇಲೆ ನಾವು ತಪ್ಪಾಗಿ ಆರೋಪಿಸುತ್ತೇವೆ ಎಂಬುದನ್ನು ತಿಳಿಸಲಾಗಿದೆ. ದೀಪವು ನಮಗೆ 'ಬೆಳಕನ್ನು ಕೊಡುತ್ತದೆ' ಎಂಬ ಪದ-ಪ್ರಯೋಗದಿಂದ ಅದು ಕೊಡುವ ಕ್ರಿಯೆಯನ್ನು ಮಾಡುತ್ತದೆ ಎಂದು ತಪ್ಪಾಗಿ ಆದರ ಮೇಲೆ ಆರೋಪಿಸುತ್ತೇವೆ. ಅದೇ ರೀತಿ ಆತ್ಮನು ಚೈತನ್ಯದ ಸ್ವರೂಪನೇ ಆಗಿದ್ದು ಅವನಿಂದ ಸ್ವಾಭಾವಿಕವಾಗಿಯೇ ಸಕಲ ಜಡವನ್ನೂ ಬೆಳಗಿ ಅವುಗಳು ನಿತ್ಯ-ಲಕ್ಷಣಯುಕ್ತವಾಗಿ ( ಭಾತಿ ) ಇರುವಂತೆ ( ಅಸ್ತಿ ) ಮಾಡುತ್ತದೆ ಮತ್ತು ಆತ್ಮನ ಈ ಜ್ಞಾನ ಸ್ವರೂಪವನ್ನು ತಪ್ಪಾಗಿ ತಿಳಿದು ಅವನ ಮೇಲೆ 'ತಿಳಿಯುವ ಕ್ರಿಯೆ' ಯನ್ನು ಅಂದರೆ 'ಸಾಕ್ಷಿತ್ವ' ವನ್ನು ನಾವು ಆರೋಪಿಸುತ್ತೇವೆ. ಆದರೆ ಅವನು ನಿರಂಜನನಾಗಿದ್ದು ಯಾವುದೇ ಕ್ರಿಯೆಯನ್ನು ಮಾಡುವುದು ಸಾಧ್ಯವಿಲ್ಲ. ಅವನಿಗೆ ಜ್ಞಾತೃತ್ವ-ಕರ್ತೃತ್ವಗಳನ್ನಾಗಲೀ ಅಥವಾ ಸಾಕ್ಷಿತ್ವವನ್ನಾಗಲೀ ಆರೋಪಿಸಲು ಬರುವುದಿಲ್ಲ.

ಓ.ಸಂ.61 : ಜಡಸ್ವರೂಪದ ಅವಿದ್ಯೆಗೆ ಯಾವ ಕ್ರಿಯೆಯನ್ನೂ ಮಾಡಲು ಬರುವುದಿಲ್ಲ. ಆದರೆ ಆತ್ಮನ ಬೆಳಗುವಿಕೆಯಿಂದ ಅದು ಕ್ರಿಯಾಶೀಲವಾಗಿ ಜಗತ್ತಿನ ಉತ್ಪತ್ತಿ-ಸ್ಥಿತಿ-ನಾಶಗಳನ್ನು ಮಾಡುವಂತಾಗುತ್ತದೆ.

ವಿವರಣೆ : ಎಲ್ಲ ಜಡದಂತೆ ಅವಿದ್ಯೆಯೂ ಜಡವಾಗಿದ್ದು ಅದು ಸ್ವತಂತ್ರವಾಗಿ ಯಾವ ಕೆಲಸವನ್ನೂ ಮಾಡುವುದಿಲ್ಲ. ಅವಿದ್ಯೆಯನ್ನು ಕತ್ತಲೆಗೆ ಹೋಲಿಸುತ್ತಾರೆ. ಕತ್ತಲೆಯು ಹೇಗೆ ಬೆಳಕಿನ ಅಭಾವವೋ ಅದರಂತೆ ಅವಿದ್ಯೆಯು (ಅಜ್ಞಾನವು) ವಿದ್ಯೆಯ ( ಜ್ಞಾನದ )

ಅಭಾವವಾಗಿರುತ್ತದೆ. ಇಲ್ಲಿ 'ಅಭಾವ' ವೆಂದರೆ 'ಇಲ್ಲದಿರುವುದು'. ಅಸ್ತಿತ್ವವಿರದ ಕತ್ತಲೆಯು ಹೇಗೆ ಒಂದು ವಸ್ತುವನ್ನು ಇನ್ನೊಂದಾಗಿ ತಪ್ಪು ತಿಳಿಯುವುದು ಹಾಗೂ 'ಭಯ' ಮುಂತಾದ ಕ್ರಿಯೆಗಳನ್ನು ಉತ್ಪತ್ತಿ ಮಾಡಲು ಶಕ್ತವಾಗುತ್ತದೋ ಹಾಗೆಯೇ ಅವಿದ್ಯೆಯೂ ಕೂಡ ಆತ್ಮನ ಪ್ರಕಾಶದಿಂದ ಪ್ರಚೋದಿಸಲ್ಪಟ್ಟು ಜಗತ್ತಿನ ಉತ್ಪತ್ತಿ-ಸ್ಥಿತಿ-ನಾಶಗಳನ್ನು ಕ್ರಮವಾಗಿ ಮಾಡಲು ಸಮರ್ಥವಾಗುತ್ತದೆ. ಅಂದರೆ ಸುಷುಪ್ತಿಯಲ್ಲಿ ಶೂನ್ಯದಂತೆ ತೋರುವ ಅವಿದ್ಯೆಯು ಆತ್ಮನ ಪ್ರಕಾಶದಿಂದ ಕನಸೆಂಬ ಮಾನಸಿಕಸೃಷ್ಟಿಯನ್ನೂ ಹಾಗೂ ಜಾಗ್ರತವೆಂಬ ಸ್ಥೂಲಸೃಷ್ಟಿಯನ್ನೂ ಮಾಡುತ್ತದೆ. ಆತ್ಮನ ಮೇಲೆ ಅವು ಕೆಲಹೊತ್ತು ತೋರಿ ( ಸ್ಥಿತವಾಗಿದ್ದು ) ನಂತರ ನಾಶ (ಲಯ) ವನ್ನು ಹೊಂದುತ್ತವೆ. ಹೀಗೆ ಜಡ ಅವಿದ್ಯೆಯಿಂದ ಜಗತ್ತಿನ ಉತ್ಪತ್ತಿ-ಸ್ಥಿತಿ-ನಾಶಗಳನ್ನು ಆತ್ಮನು ಮಾಡಿಸಿದಂತೆ ಕಾಣುತ್ತಾನೆ.

**ಓ.ಸಂ.62 :** ಆತ್ಮನ ಪ್ರಕಾಶದ ಸಾಮರ್ಥ್ಯದಿಂದ ಅವಿದ್ಯೆಯಲ್ಲಿರುವ ಸತ್ವ-ರಜ-ತಮೋ ಗುಣಗಳು ಪ್ರಚೋದಿಸಲ್ಪಟ್ಟು ಜೀವ-ಜಗತ್ತಿನ ಉತ್ಪತ್ತಿ ಸ್ಥಿತಿ ನಾಶಗಳನ್ನು ಮಾಡುತ್ತವೆ.

**ವಿವರಣೆ :** ಅನಾದಿಯಾದ ಅವಿದ್ಯೆಯು ಸತ್ವ-ರಜ-ತಮೋ ಗುಣಗಳನ್ನು ಹೊಂದಿರುತ್ತದೆ. ಅಸತ್-ಜಡ-ದುಃಖ ರೂಪವಾಗಿರುವ ಈ ಅವಿದ್ಯೆಯು ಆತ್ಮನ ಪ್ರಕಾಶವು ಬಿದ್ದ ಕೂಡಲೇ ವಾಸ್ತವಿಕವಾಗಿ ಕ್ರಮವಾಗಿ ಅಸ್ತಿ-ಭಾತಿ-ಪ್ರಿಯ ಸ್ವರೂಪದ್ದಾಗುವುದಲ್ಲದೇ ಸಕ್ರಿಯವಾಗುತ್ತದೆ. ಈ ಮೂರೂ ಗುಣಗಳು ಮೊದಲು ಒಂದಕ್ಕೊಂದು ಮಿಶ್ರವಾಗದೇ ಅವ್ಯಕ್ತವೂ ಹಾಗೂ ಅನಿರ್ವಚನೀಯವೂ ಆಗಿದ್ದವು. ನಂತರ ಅವು ಸಕ್ರಿಯವಾದ ಮೇಲೆ ಒಂದಕ್ಕೊಂದು ಮಿಶ್ರವಾಗಲು ಪ್ರಾರಂಭಿಸಿ ಸಕಲ ಕಾರ್ಯ ಜಗತ್ತನ್ನು ಅಂದರೆ ದೇಹ ಸಹಿತವಾದ ಇಡೀ ಜಗತ್ತನ್ನು ಸೃಷ್ಟಿಮಾಡಲು ಸಮರ್ಥವಾಗುತ್ತವೆ. ಪ್ರತಿಯೊಂದು ಕಾರ್ಯ-ವಿಶೇಷದಲ್ಲೂ ಯಾವ ಗುಣ ಪ್ರಧಾನವಾಗಿರುತ್ತದೆ ಎಂಬುದರ ಮೇಲೆ ಆ ಕಾರ್ಯವು ಅವಲಂಬಿಸಿರುತ್ತದೆ. ಅಂದರೆ ಪ್ರತಿಯೊಂದು ವಸ್ತುವಿನಲ್ಲೂ ಎಲ್ಲ ಮೂರೂ ಗುಣಗಳೂ ವಿವಿಧ ಪ್ರಮಾಣದಲ್ಲಿ ಇದ್ದೇ ಇರುತ್ತವೆ. ಮುಂದಿನ ಓವೀಗಳಲ್ಲಿ ಇದರ ವಿವರಗಳನ್ನು ನೋಡುತ್ತೇವೆ.

**ಓ.ಸಂ.63 :** ಅವಿದ್ಯೆಯು ಜಡಸ್ವರೂಪದ್ದಾಗಿದ್ದರೂ ಅದರ ಸತ್ವ ಗುಣವು ಆತ್ಮನ ಪ್ರತಿಬಿಂಬವನ್ನು ಗ್ರಹಿಸುವ ಶಕ್ತಿಯನ್ನು ಹೊಂದಿದೆ. ಹೀಗೆ ಅದಕ್ಕೆ ಕಾರ್ಯದ ಕರ್ತೃವಾಗಲು ಸಾಮರ್ಥ್ಯ ಬರುತ್ತದೆ.

**ವಿವರಣೆ :** ಅವಿದ್ಯೆಯ ಸತ್ವಾಂಶವು ಉಳಿದೆರಡು ಗುಣಗಳಿಗಿಂತ ಶ್ರೇಷ್ಠವಾಗಿರುತ್ತದೆ. ಈ ಸತ್ವ ಪ್ರಧಾನ ಅಂಶಕ್ಕೆ 'ಬುದ್ಧಿ' ಎಂಬ ಹೆಸರು ಇರುತ್ತದೆ. ಅದರಲ್ಲಿ ಮಾತ್ರ ಆತ್ಮನು ಪ್ರತಿಫಲಿಸಿದಾಗ ಆತ್ಮನ ಪ್ರತಿಬಿಂಬವು ಕಾಣತೊಡಗುತ್ತದೆ. ಎಷ್ಟರಮಟ್ಟಿಗೆ ಸತ್ವವು ಶುದ್ಧವಾಗಿರುತ್ತದೋ ಅಂದರೆ ಉಳಿದೆರಡು ಗುಣಗಳು ಸೇರದೇ ಇರುತ್ತದೋ ಅಷ್ಟರಮಟ್ಟಿಗೆ ಈ ಪ್ರತಿಬಿಂಬವು ಸ್ಪಷ್ಟವಾಗಿರುತ್ತದೆ. ಕನ್ನಡಿಯು ಉಳಿದ ವಸ್ತುಗಳಂತೆ ಜಡವಿದ್ದರೂ ಕೂಡ ಅದರಲ್ಲಿ ಮಾತ್ರ ಬೆಳಕಿನ ಪ್ರತಿಬಿಂಬವು ಬೀಳುತ್ತದೆ. ಕನ್ನಡಿಯ ಮಲಿನತೆ ಇಲ್ಲದೇ ಇದ್ದಾಗ ಸ್ವಚ್ಛವಾದ ಪ್ರತಿಬಿಂಬವು ಬೀಳುತ್ತದೆ. ಹಾಗೆಯೇ ಅದರಲ್ಲಿ ಬೀಳುವ ಪ್ರತಿಬಿಂಬದ ಸ್ಪಷ್ಟತೆ ಸತ್ವಶುದ್ಧಿಗನುಸರಿಸಿ ಇರುತ್ತದೆ. ಈ ಪ್ರತಿಬಿಂಬವೇ 'ನಾನು', 'ನಾನು' ಎಂಬ ಜೀವಭಾವವಾಗಿರುತ್ತದೆ. ಈ ಜೀವಕ್ಕೆ ಜ್ಞಾತೃತ್ವ ಇರುವುದರಿಂದಲೇ ಅದು ರಜ ಮತ್ತು ತಮೋ ಗುಣಗಳ ಮೇಲೆ ನಿಯಂತ್ರಣ ಸಾಧಿಸುತ್ತದೆ ಮತ್ತು ಅವುಗಳ ಅಭಿಮಾನಿಯಾಗಿರುತ್ತದೆ. ಅಂದರೆ ಅವುಗಳ ಕ್ರಿಯೆಗಳನ್ನೆಲ್ಲ ತನ್ನದೆಂದೇ ತಿಳಿದುಕೊಳ್ಳುತ್ತದೆ. ಹೀಗೆ ಜೀವನು ತಾನೇ ಜ್ಞಾತೃ, ಕರ್ತೃ, ಭೋಕ್ತೃವಾಗಿರುವನೆಂದು ತಿಳಿಯುತ್ತಾನೆ.

**ಓ.ಸಂ.64 :** ಹೀಗೆ ಅವಿದ್ಯೆಯ ಗುಣಗಳು ತಮ್ಮ ಸ್ವಭಾವದಿಂದಲೇ ಲೌಕಿಕ ವ್ಯವಹಾರವನ್ನೂ ಮಾಡಲು ಸಮರ್ಥವಾಗಿವೆ. ಆದರೆ ಈ ಸಕಲ ಕಾರ್ಯವನ್ನೂ ಅಜ್ಞಾನದಿಂದ ಆತ್ಮನ ಮೇಲೆ ಆರೋಪಿಸಲಾಗುತ್ತದೆ.

**ವಿವರಣೆ :** ಅವಿದ್ಯೆಯ ಮೂರೂ ಗುಣಗಳು ಇಡೀ ಸೃಷ್ಟಿಯಲ್ಲಿ ಪ್ರತಿಯೊಂದಕ್ಕೂ ಕಾರಣವಾಗಿವೆ. ಅವೇ ಜ್ಞಾತೃ- ಜ್ಞಾನ-ಜ್ಞೇಯವಾಗಿ ತೋರುತ್ತಿವೆ. ಹಾಗೆಯೇ ಅವೇ ಭೋಕ್ತೃ-ಭೋಗ-ಭೋಗ್ಯವಾಗಿಯೂ ತೋರುತ್ತಿವೆ ಮತ್ತು ಆ ಗುಣಗಳೇ ಕರ್ತೃ-ಕ್ರಿಯೆ-ಕರ್ಮವಾಗಿಯೂ ತೋರುತ್ತವೆ. ಈ ರೀತಿ ಗುಣಗಳೇ ವಿಷಯಿಯಾಗಿಯೂ ಹಾಗೂ ವಿಷಯವಾಗಿಯೂ ಮತ್ತು ಅವುಗಳ ಮಧ್ಯೆ ಸಂಪರ್ಕವಾಗಿಯೂ ಕೆಲಸ ಮಾಡುತ್ತವೆ. ರಜ-ತಮೋ ಮಿಶ್ರಿತ ಸತ್ವ ಪ್ರಧಾನ ಗುಣಗಳಿಂದ ಸೂಕ್ಷ್ಮವಾದ ವಿಷಯಿಯೂ, ಸತ್ವ-ರಜೋ ಮಿಶ್ರಿತ ತಮೋ ಪ್ರಧಾನ ಗುಣಗಳಿಂದ ಜಡ ವಿಷಯವೂ ಹಾಗೂ ಸತ್ವ-ತಮೋ ಮಿಶ್ರಿತ ರಜೋ ಪ್ರಧಾನ ಗುಣಗಳಿಂದ ವಿಷಯಿ-ವಿಷಯಗಳ ಸಂಪರ್ಕವೂ ಸಾಧ್ಯವಾಗುತ್ತದೆ. ಭಗವದ್-ಗೀತೆಯಲ್ಲೂ ಇದನ್ನೇ, "ಗುಣಗಳು

ಗುಣಗಳಲ್ಲಿ ವರ್ತಿಸುತ್ತವೆ" ಎಂದು ಹೇಳಲಾಗಿದೆ ("ಗುಣಾ ಗುಣೇಷು ವರ್ತಂತೆ..." ಭ.ಗೀ. III.28). ಇಲ್ಲಿ ಗುಣಗಳು ಎಂಬಲ್ಲಿ 'ವಿಷಯಿ' ಯಾಗಿ ಅಂದರೆ, ಸಾತ್ವಿಕ ಪ್ರಧಾನವಾದ ಅಂತಃಕರಣಾದಿ ಇಂದ್ರಿಯಗಳು 'ನಾನು' ಎಂಬ ಭಾವದಿಂದ, 'ಗುಣಗಳಲ್ಲಿ' ಅಂದರೆ ತಮೋ ಪ್ರಧಾನವಾದ ಜಡ ವಿಷಯಗಳಲ್ಲಿ ವರ್ತಿಸಿ, ಸುಖ ದುಃಖಗಳನ್ನು ಪಡೆಯುತ್ತವೆ. ಹೀಗೆ 'ದೇಹೋಽಹಂ' ಎಂಬ ಭಾವದ 'ಜೀವ'ನು ತಾನೇ ಆತ್ಮನೆಂದು ತಪ್ಪು ತಿಳಿದು ತಾನು ಅನುಭವಿಸುತ್ತಿರುವ ಸುಖ-ದುಃಖಗಳನ್ನು ಹಾಗೂ ತಾನು ಮಾಡುವ ಸಕಲ ಕಾರ್ಯಗಳನ್ನು ಆತ್ಮನೇ ಮಾಡುತ್ತಿದ್ದಾನೆಂದು ತಪ್ಪಾಗಿ ತಿಳಿದು ಆರೋಪಿಸುತ್ತಾನೆ.

**ಓ.ಸಂ.65 :** ಹೀಗೆ ಅವಿದ್ಯೆ ಮತ್ತು ಅದರ ಸಕಲ ಕಾರ್ಯಗಳ ಸಾಕ್ಷಿತ್ವವಾಗಲೀ, ಪ್ರೇರಕತ್ವವಾಗಲೀ ಹಾಗೂ ಅವುಗಳ ನಿಯಂತ್ರಣ ಮಾಡುವುದಾಗಲೀ ಆತ್ಮನಿಗೆ ಸಂಬಂಧ ಪಡುವುದಿಲ್ಲ ಮತ್ತು ಅದು ಮಾಯೆ ( ಅವಿದ್ಯೆ) ಗೆ ಸಂಬಂಧ ಪಟ್ಟಿರುತ್ತದೆ. ಅಜ್ಞಾನಿ 'ಜೀವ' ರು ಅವುಗಳನ್ನು ಆತ್ಮನ ಮೇಲೆ ತಪ್ಪಾಗಿ ಆರೋಪಿಸುತ್ತಿದ್ದಾರೆ.

**ವಿವರಣೆ :** ಈ ಓವೀಯಲ್ಲಿ ಈ ಹಿಂದೆ ಹೇಳಿರುವುದನ್ನೇ ಸಮಾರೋಪ ಮಾಡಿ ಹೇಳಲಾಗಿದೆ. ಅನಾದಿಯಾಗಿರುವ ಮತ್ತು ಅವ್ಯಕ್ತವಾಗಿರುವ ಅವಿದ್ಯೆಯು ಅಥವಾ ಮಾಯೆಯು ಆತ್ಮನ ಆಶ್ರಯದಲ್ಲಿ ಸ್ವಶಕ್ತಿಯಿಂದಲೇ ಅದರ ಸ್ವಭಾವದಿಂದ ತಾನೇ ಕಾರ್ಯರೂಪವಾಗಿ ಪರಿಣಮಿಸುತ್ತದೆ ಅಂದರೆ ಬದಲಾಯಿಸುತ್ತದೆ. ವ್ಯಕ್ತವಾಗಿರುವ ಈ ಕಾರ್ಯರೂಪವು ಸೂಕ್ಷ್ಮ ರೂಪವಾದ ಅಂತಃಕರಣಾದಿಗಳನ್ನೂ ಹಾಗೂ ಸ್ಥೂಲ ರೂಪವಾದ 'ಜೀವ'ರ ದೇಹ ಸಹಿತ ಸಮಸ್ತ ಜಡ ಜಗತ್ತನ್ನೂ ಸೇರಿ ಕೊಂಡಿದೆ. 'ಜೀವ' ರ ಈ ಅಂತಃಕರಣ ಹಾಗೂ ಬಾಹ್ಯಕರಣಗಳಿಂದ ಮಾಡಲ್ಪಡುವ ಅಸಂಖ್ಯಾತ ಮಾನಸಿಕ ಹಾಗೂ ದೈಹಿಕ ಕ್ರಿಯೆಗಳಿಗೂ ಕೂಡ ಅರಿವು ಬೇಕಾಗಿರುವುದರಿಂದ ಆತ್ಮನ ಆಶ್ರಯವು ಬೇಕಾಗುತ್ತದೆ. ಹೀಗೆ ಆತ್ಮಾಶ್ರಯವು ಅತ್ಯಾವಶ್ಯಕವಿರುವುದರಿಂದ ಆತ್ಮನಿಗೆ ಸಾಕ್ಷಿತ್ವವಾಗಲೀ, ಈ ಕ್ರಿಯೆಗಳನ್ನು ಉಂಟುಮಾಡುವ ಪ್ರೇರಕತ್ವವಾಗಲೀ, ಇಲ್ಲವೇ ಈ ಕ್ರಿಯೆಗಳ ನಿಯಂತೃತ್ವವಾಗಲೀ ( ನೇತೃತ್ವ ) ಇರುವುದಿಲ್ಲ. ಇದನ್ನು ತಿಳಿಯದ 'ಜೀವ'ರು ಇವೆಲ್ಲವುಗಳನ್ನು ತಪ್ಪಾಗಿ ಆತ್ಮನಲ್ಲಿ ಆರೋಪಿಸುತ್ತಾರೆ.

**ಓ.ಸಂ.66 :** ಈ ಅವಿದ್ಯೆಯೇ ಮಾಯಾ ಸ್ವರೂಪವಿದ್ದು ಹಿಂದೆ ತಿಳಿಸಿದ ಶುದ್ಧ ಸತ್ವಸ್ವರೂಪದ ಮೂಲ ಪ್ರಕೃತಿಯಾಗಿದೆ. ಈ ಅವಿದ್ಯೆಯಿಂದಲೇ ನಿರ್ಗುಣಬ್ರಹ್ಮನು ಸಗುಣನಾದ ಈಶ್ವರನೆಂದು ಆರೋಪಿಸಲ್ಪಟ್ಟನು.

**ವಿವರಣೆ :** ಈ ಓವೀಗಳಲ್ಲಿ ಅವಿದ್ಯೆಯ ಪರಿಣಾಮಗಳನ್ನು ವಿವರಿಸಲಾಗಿದೆ. ಈ ವರೆಗೆ ಹಿಂದಿನ ಕೆಲವು ಓವೀಗಳಲ್ಲಿ ಅವಿದ್ಯೆಯು ವ್ಯಷ್ಟಿ 'ಜೀವ' ನ ಮೇಲೆ ಬೀರಿದ ಪರಿಣಾಮಗಳನ್ನು ಕುರಿತು ವಿವರಿಸಲಾಗಿದೆ. ಇನ್ನು ಮುಂದೆ ಇದೇ ಅವಿದ್ಯೆಯು ಸಮಷ್ಟಿ ಈಶ್ವರನ ಮೇಲೆ ಪರಿಣಾಮಗಳನ್ನು ಹೇಗೆ ಬೀರಿವೆ ಎನ್ನುವುದನ್ನು ವಿವರಿಸಲಾಗಿದೆ. ಇಲ್ಲಿ ಅವಿದ್ಯೆಯಲ್ಲಿರುವ ಮೂರು ಗುಣಗಳಲ್ಲಿ ಸತ್ವದಲ್ಲಿ, ಶುದ್ಧ ಸತ್ವ ಭಾಗವು, ಅಂದರೆ ರಜ-ತಮೋ ಗುಣಗಳ ಮಿಶ್ರವಾಗಿರದ ಸಂಪೂರ್ಣ ಸತ್ವ ಭಾಗವು, ಅದಕ್ಕೆ ಮೂಲ ಪ್ರಕೃತಿ ಎಂದೂ, ಅದನ್ನೇ ಮಾಯೆಯೆಂದೂ ಹಿಂದೆ ವಿವರಿಸಲಾಗಿದೆ ( ಓ.ಸಂ.47-55 ). ಅವಿದ್ಯೆಯ ಈ ಸತ್ವ ಭಾಗದಲ್ಲಿ ಬಿದ್ದ ಅದ್ವಯ ನಿರ್ಗುಣ ಬ್ರಹ್ಮನ ಪ್ರತಿಬಿಂಬವನ್ನೇ ಈಶ್ವರನೆನ್ನುವರು. ಹೀಗೆ ಬ್ರಹ್ಮನು ಅವಿದ್ಯೆಯ ( ಮಾಯೆಯ ) ಉಪಾಧಿಯಾಗಿ ತೋರುತ್ತಿದ್ದು, ಈಶ್ವರನೆಂಬ ಹೆಸರನ್ನು ಪಡೆಯುತ್ತಾನೆ. ಇದನ್ನೆಲ್ಲ 'ಜೀವ' ನ ಅವಿದ್ಯೆಯ ದೃಷ್ಟಿಯಿಂದ ಹೇಳಲಾಗಿದೆ. ಸದಾ ಸತ್ವಗುಣವು ಉಳಿದ ಗುಣಗಳನ್ನು ನಿಯುಂತ್ರಣದಲ್ಲಿಡುತ್ತದೆ. ಹೀಗೆ ಈಶ್ವರನ ನಿಯಂತ್ರಣಕ್ಕೆ ಇಡೀ ಅವಿದ್ಯೆಯು ( ಮಾಯೆಯು ) ಒಳಪಟ್ಟಿರುವುದರಿಂದ ಮಾಯೆಯನ್ನು ಈಶ್ವರನ ಅಭಿಮಾನಿಯೆಂದೂ ಹಾಗೂ ಅವನ ಶಕ್ತಿಯೆಂದೂ ಹೇಳಲಾಗಿದೆ. ಈ ಮಾಯೆಯು (ಅವಿದ್ಯೆಯು) ಇಡೀ ಜೀವ-ಜಗತ್ತುಗಳಿಗೆ ಕಾರಣವಾಗಿರುತ್ತದೆ. ಈ ಅವಿದ್ಯೆಯ ಶುದ್ಧ ಸಾತ್ವಿಕ ಅಂಶವು ಸಕಲಕ್ಕೆ ಕಾರಣವು ಆಗಿರುತ್ತದೆ ಮತ್ತು ಈ ಮೂರೂ ಗುಣಗಳ ಮಿಶ್ರಣದಿಂದ ಸಕಲ ಕಾರ್ಯವು, ಅಂದರೆ ಜೀವ ಮತ್ತು ಜಗತ್ತುಗಳು, ಅವುಗಳ ಸೂಕ್ಷ್ಮ ಮತ್ತು ಸ್ಥೂಲರೂಪದಲ್ಲಿ ತಿಳಿಯಲ್ಪಡಬಹುದಾಗಿದ್ದು, ಬಾಹ್ಯದಲ್ಲಿ ವ್ಯಕ್ತಗೊಳ್ಳುತ್ತವೆ. ಹಿಂದಿನ ಓವೀ ಸಂಖ್ಯೆ 56 ರಲ್ಲಿ ಇದೇ ಅಭಿಪ್ರಾಯವು ವ್ಯಕ್ತವಾಗಿರುತ್ತದೆ. ಹೀಗೆ ಮಾಯಾಶಕ್ತಿಯಿಂದ ಈಶ್ವರನು ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುತ್ತಾನೆ. ಅವನು ಈ ಕಾರಣದಿಂದ ಸರ್ವಜ್ಞನೆಂದೂ, ಸರ್ವಶಕ್ತನೆಂದೂ, ಸರ್ವ ವ್ಯಾಪಕನೆಂದೂ, ಅನಂತಗುಣಗಣಗಳ ಪರಿಪೂರ್ಣನೆಂದೂ ತಿಳಿಯಲ್ಪಡುತ್ತಾನೆ. ಹೀಗೆ 'ಜೀವ' ನ ಅವಿದ್ಯೆಯಿಂದಲೇ ಅದ್ವಯ, ನಿರ್ಗುಣ, ನಿರ್ವಿಕಲ್ಪ ಬ್ರಹ್ಮನನ್ನು ಈ ರೀತಿ ಸಗುಣ ಬ್ರಹ್ಮನೆಂದು ತಪ್ಪಾಗಿ ಆರೋಪಿಸಲಾಗಿದೆ.

**ಓ.ಸಂ.67 :** ಈ ರೀತಿ ಈಶ್ವರನೂ ಅವಿದ್ಯಾ-ಸೃಷ್ಟಿಯಾಗಿರುತ್ತಾನೆ. 'ಜೀವ' ನ ಅವಿದ್ಯೆಯು ನಿವಾರಣೆಯಾದ ಕೂಡಲೇ ಈಶತ್ವವೂ ನಿವಾರಣೆಯಾಗಿ ಶುದ್ಧ ಬ್ರಹ್ಮನು ಮಾತ್ರ ಉಳಿಯುತ್ತಾನೆ.

**ವಿವರಣೆ :** ಅವಿದ್ಯೆಯ ಮಲಿನ ಗುಣಗಳ ಮಿಶ್ರಣದಿಂದ ಹೇಗೆ ಜೀವ ಜಗತ್ತುಗಳು ಸೃಷ್ಟಿ ಹೊಂದಿದವೋ ಹಾಗೆಯೇ ಅವಿದ್ಯೆಯ ಶುದ್ಧ ಸಾತ್ವಿಕ ಗುಣದಲ್ಲಿ ಉಂಟಾಗಿರುವ ಅದ್ವಯ ಬ್ರಹ್ಮದ ಶುದ್ಧವಾದ ಪ್ರತಿಬಿಂಬದಿಂದ ಈಶ್ವರನು ಸೃಷ್ಟಿ ಹೊಂದಿದನು. ಆದುದರಿಂದ ಈಶ್ವರನು 'ಜೀವ' ನ ಅವಿದ್ಯಾ ಸೃಷ್ಟಿಯಾಗಿರುತ್ತಾನೆ. ಇಲ್ಲಿ ಶುದ್ಧ ಸತ್ವದಲ್ಲಿ ಉಂಟಾದ ಶುದ್ಧವಾದ ಬ್ರಹ್ಮನ ಪ್ರತಿಬಿಂಬವು ಬ್ರಹ್ಮನ ಶುದ್ಧ ಚೈತನ್ಯವಲ್ಲದಿದ್ದರೂ ಶುದ್ಧ ಸಾತ್ವಿಕ ಬುದ್ಧಿಯ ಮೇಲೆ ಬಿದ್ದಿರುವ ಪ್ರತಿಬಿಂಬದಿಂದ ಹೋರಾಟ ಚಿದಾಭಾಸವಾಗಿರುತ್ತದೆ. ಇದೇ ವ್ಯಷ್ಟಿರೂಪದಲ್ಲಿ ಪ್ರತಿ 'ಜೀವ'ರಿಗೆ ಅಪರೋಕ್ಷಾನುಭವದಿಂದ ತಿಳಿಯಲ್ಪಡುವುದೇ ಜೀವ-ಸಾಕ್ಷಿಯಾಗಿರುತ್ತದೆ. ಇದೇ ಸಮಷ್ಟಿರೂಪದಲ್ಲಿ ಜಗತ್ತಿನ ಸಾಕ್ಷಿಯಾದ ಪರೋಕ್ಷನಾದ ಈಶ್ವರನಾಗಿರುತ್ತಾನೆ. ಈ ರೀತಿ ಅವಿದ್ಯೆಯಿಂದಲೇ 'ಜೀವ'ನ ಹಾಗೂ ಈಶ್ವರನ ಸೃಷ್ಟಿ ಅಗಿರುತ್ತದೆ. ಅವ್ಯಕ್ತವಾಗಿರುವ ಅವಿದ್ಯೆಯು ಶುದ್ಧ ಬ್ರಹ್ಮನ ಸ್ವರೂಪವನ್ನೇ ಆವರಿಸಿ ಸತ್ಯತ್ವದಿಂದ ಇಲ್ಲದಿರುವ ಈ ಜೀವ-ಈಶ್ವರನನ್ನು ಹಾಗೂ ಅವರಿಂದ ಸೃಷ್ಟಿಸಲ್ಪಟ್ಟ ಈ ಜಗತ್ತಿಗೆ ಕಾರಣವಾಗಿರುತ್ತದೆ. ಯಾವಾಗ 'ನಾನು ಬ್ರಹ್ಮನಿದ್ದೇನೆ' ಎಂಬ ಜ್ಞಾನ ಉಂಟಾಗುತ್ತದೋ ಆಗ 'ಜೀವ' ನೂ ಮತ್ತು ಅವನ ಸೃಷ್ಟಿಯಾದ ಈ ಜಗತ್ತೂ ಸಂಪೂರ್ಣ ನಾಶವಾಗುತ್ತವೆ. ಇವು ನಾಶವಾದ ಮೇಲೆ ಇವುಗಳ ಕಾರಣನಾದ ಈಶನೂ, ಅಸ್ತಿ-ಭಾತಿ-ಪ್ರಿಯಸ್ವರೂಪವಾಗಿರುವ ಸರ್ವ ಸಾಮಾನ್ಯವಾಗಿರುವ ಈಶ-ನಿರ್ಮಿತ ಜಗತ್ತೂ ನಾಶ ಹೊಂದುತ್ತವೆ. ಹೀಗೆ 'ಜೀವ'-ಈಶರ ಜಡ ಉಪಾಧಿಗಳು ಸಂಪೂರ್ಣ ನಾಶವಾಗಿ ಅವರ ದೇಹ ಹಾಗೂ ಸಾಕ್ಷಿತ್ವಗಳು ಕ್ರಮವಾಗಿ ನಾಶಹೊಂದುತ್ತವೆ. ಉಳಿಯುವುದು ಕೇವಲ ಶುದ್ಧ ಬ್ರಹ್ಮನು ಮಾತ್ರ. ಅದು ಶುದ್ಧ ಚೈತನ್ಯ ಹಾಗೂ ಆನಂದ ಪೂರ್ಣವಾಗಿರುತ್ತದೆ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳುತ್ತಾರೆ. 'ನಾನು ದೇಹವೂ ( ಜೀವ ) ಅಲ್ಲ', 'ನಾನು ಬ್ರಹ್ಮನೂ ( ಈಶ್ವರ ) ಅಲ್ಲ', 'ನಾನು ನಾನೇ ಆಗಿದ್ದೇನೆ' ಅಂದರೆ ನಾನು ಮಾತ್ರ ಉಳಿಯುತ್ತೇನೆ. ಇದನ್ನೇ

"ಕೇವಲೋಽಹಂ" ಅಂದರೆ "ಕೇವಲ ನಾನು" ಮಾತ್ರ ಉಳಿಯುತ್ತೇನೆ ಎಂದು ಕೂಡ ಶ್ರುತಿಯಲ್ಲಿ ತಿಳಿಸಲಾಗಿದೆ.

**ಓ.ಸಂ.68 :** ಅನಾದಿಯಾದ ಈ ಅವಿದ್ಯೆಯಿಂದಲೇ ಅನೇಕ ಜೀವರು ಸೃಷ್ಟಿಯಾಗಿರುತ್ತಾರೆ. ಸರ್ವಜ್ಞನಾದ ಈಶ್ವರನು ಅವರ ಹಿಂದಿನ ಸಕಲ ಕರ್ಮಗಳನ್ನೂ ತಿಳಿದು ಅವುಗಳಿಗೆ ಬರಬೇಕಾದ ಯೋಗ್ಯಫಲಗಳನ್ನು ಕೊಡುತ್ತಾನೆ.

**ವಿವರಣೆ :** ಮುಂದಿನ ಓವೀಯ ಪ್ರಥಮ ಚರಣವನ್ನು ತೆಗೆದುಕೊಂಡು ಈ ಓವೀಯನ್ನು ವಿವರಿಸಲಾಗಿದೆ. ಅವಿದ್ಯೆಯ ಮೂರು ಗುಣಗಳ ಮಿಶ್ರಣದಿಂದ ಸೂಕ್ಷ್ಮ-ಸ್ಥೂಲ-ಜಡ ಜಗತ್ತು ಸೃಷ್ಟಿಯಾಗುತ್ತದೆ. ಸೂಕ್ಷ್ಮದಲ್ಲಿ, ಸಮಷ್ಟಿ ಅಂತಃಕರಣವಾದ ಹಿರಣ್ಯಗರ್ಭನು ಅಂದರೆ ಚತುರ್ಮುಖ ಬ್ರಹ್ಮನ ಮನಸ್ಸು ಹಾಗೂ ಅಸಂಖ್ಯಾತ 'ಜೀವ'ರ ಅಂತಃಕರಣಗಳು ಸೃಷ್ಟಿಯಾಗುತ್ತವೆ. ಹಾಗೆಯೇ ಸ್ಥೂಲದಲ್ಲಿ, ಈ ಸಮಷ್ಟಿ ಜಡ ಜಗತ್ತಾದ ವಿರಾಟನು ಅಂದರೆ ಚತುರ್ಮುಖ ಬ್ರಹ್ಮನ ಬಾಹ್ಯ ದೇಹವು ಮತ್ತು ಅಸಂಖ್ಯಾತ 'ಜೀವ' ರ ಬಾಹ್ಯ ಜಡ ದೇಹಗಳು ಸೃಷ್ಟಿಯಾಗುತ್ತವೆ. 'ಜೀವ'ರ ಈ ಮಲಿನ-ಸಾತ್ವಿಕ ಅಂತಃಕರಣದಲ್ಲಿ ಬೀಳುವ ಈಶ್ವರನ ಪ್ರತಿಬಿಂಬವೇ ಜೀವತ್ವವಾಗಿ ದೇಹಾಭಿಮಾನದಿಂದ ಸಕಲ ವ್ಯಾಪಾರವನ್ನೂ ಮಾಡಲು ಶಕ್ಯವಾಗುತ್ತದೆ. ಆದರೆ ಈಶ್ವರನು ಪ್ರತಿ 'ಜೀವ'ರ ಪ್ರಾರಬ್ಧಾನುಸಾರವಾಗಿ ದೇಹಾಂತಃಕರಣಗಳನ್ನಲ್ಲದೇ ಕರ್ಮಫಲಗಳನ್ನೂ ಅವರಿಗೆ ಉಂಟುಮಾಡುತ್ತಾನೆ. ಅಂದರೆ ಒಳ್ಳೆಯ ಕರ್ಮಗಳಿಗೆ ಒಳ್ಳೆಯ ಸುಖ ಫಲಗಳನ್ನೂ ದುಷ್ಟ ಕರ್ಮಗಳಿಗೆ ದುಃಖ ಕಾರಕ ಕೆಟ್ಟ ಫಲಗಳನ್ನೂ ಯೋಗ್ಯ ರೀತಿಯಲ್ಲಿ ಕೊಡುತ್ತಾನೆ.

**ಓ.ಸಂ.69 :** 'ಜೀವ' ರ ಕರ್ಮಕ್ಕನುಸರಿಸಿ ಯೋಗ್ಯ ಫಲಗಳನ್ನು ಕೊಡುವುದಕ್ಕೋಸ್ಕರವೇ ಈಶ್ವರನು ಅವರ ಅಂತಃಕರಣದಲ್ಲಿ ಪ್ರತಿಬಿಂಬ ರೂಪದಲ್ಲಿ ಪ್ರವೇಶ ಮಾಡಿ ಅದರ ಅಭಿಮಾನವನ್ನು ವಹಿಸಿ ತಾನೇ ಜೀವನೆಂದು ತೋರುತ್ತಿದ್ದಾನೆ.

**ವಿವರಣೆ :** ಅವಿದ್ಯೆಯ ಪರಿಣಾಮವಾದ ಶುದ್ಧ ಸಾತ್ವಿಕ ಸಮಷ್ಟಿ ಬುದ್ಧಿ ವೃತ್ತಿಯಲ್ಲಿ ಬ್ರಹ್ಮನ ಅತ್ಯಂತ ಶುದ್ಧ ಪ್ರತಿಬಿಂಬವನ್ನೇ ಈಶ್ವರನೆಂದು ಕರೆಯುತ್ತಾರೆ. ಇವನನ್ನೇ ತಿಳಿಯಲ್ಪಡಬಹುದಾದ ( ಜ್ಞೇಯ ) ಬ್ರಹ್ಮನೆಂದೂ ಹಾಗೂ ಅವನನ್ನೇ ಸಗುಣಬ್ರಹ್ಮನೆಂದೂ

ಕರೆಯುತ್ತಾರೆ. ಈ ಸಚ್ಚಿದಾನಂದ ಸ್ವರೂಪನಾಗಿರುವ ಇವನು ಸರ್ವಜ್ಞನೂ ಹಾಗೂ ಸರ್ವಶಕ್ತನೂ ಆಗಿರುವುದರಿಂದ ಪ್ರತಿ 'ಜೀವ' ನು ಪೂರ್ವ-ಕಲ್ಪಗಳಲ್ಲಿ ಮಾಡಿದ ಪಾಪ-ಪುಣ್ಯ ಕರ್ಮಗಳು ಮತ್ತು ಅವುಗಳಿಗೆ ಉಂಟಾಗುವ ಫಲಗಳ ಜ್ಞಾನವನ್ನು ತಿಳಿದು ಆ ಫಲಗಳನ್ನು 'ಜೀವ'ನು ಭೋಗಿಸುವ ಉದ್ದೇಶದಿಂದ ಭೋಗ-ಭೂಮಿಯಾಗಿ ಈ ಜಗತ್ತನ್ನು ಸೃಷ್ಟಿಸಿದನು. ಈ ಉದ್ದೇಶವು ಈಡೇರಲು ಅವನೇ ಸ್ವತಃ ಪ್ರತಿಯೊಂದು ಅಂತಃಕರಣಲ್ಲೂ ಪ್ರವೇಶಿಸಿ ಪ್ರತಿಬಿಂಬ ರೂಪದಲ್ಲಿ 'ಜೀವ'ನೆನಿಸಿಕೊಂಡಿದ್ದಾನೆ. ಹೀಗೆ ತಾನೇ ಸೃಷ್ಟಿ ಮಾಡಿದ ಅಂತಃಕರಣದಲ್ಲಿ ತಾನೇ ಪ್ರವೇಶಿಸಿದ್ದಾನೆ. "ತತ್ ಸೃಷ್ಟ್ವಾ ತದೇವಾನುಪ್ರಾವಿಶತ್" (ತೈತ್ತರಿಯೋಪನಿಷತ್, ಬ್ರಹ್ಮಾನಂದವಲ್ಲಿ, ಅನುವಾಕ-೬ ) ಎಂಬ ಶ್ರುತಿ ವಚನವೂ ಇದಕ್ಕನುಗುಣವಾಗಿಯೇ ಇರುವುದು. ಪ್ರತಿ 'ಜೀವ' ನ ಪೂರ್ವೋಕ್ತ ಕರ್ಮಗಳು ಭಿನ್ನ ಭಿನ್ನವಿರುತ್ತವೆ. ಅದಕ್ಕನುಸರಿಸಿ ಅವನ ಅಂತಃಕರಣವೂ ಸತ್ವಾದಿ ಗುಣಗಳ ಮಿಶ್ರಣದಿಂದ ವಿವಿಧ ರೀತಿಯಲ್ಲಿರುವ ಅವುಗಳ ಮಲಿನತೆಗನುಸರಿಸಿ ಈಶ್ವರನ ಪ್ರತಿಬಿಂಬಗಳೂ ಭಿನ್ನ ಭಿನ್ನವಾಗಿ ಪ್ರತಿ 'ಜೀವ'-'ಜೀವ'ರಲ್ಲೂ ಭಿನ್ನತೆಯು ಅನಿವಾರ್ಯವಾಗಿರುತ್ತದೆ. ಪ್ರತಿ ಅಂತಃಕರಣದ ವೈವಿಧ್ಯತೆಗನುಸರಿಸಿ ವಿವಿಧ ಇಂದ್ರಿಯಗಳನ್ನೊಳಗೊಂಡ ವಿವಿಧ ಸ್ಥೂಲದೇಹಗಳು 'ಜೀವ' ರಿಗೆ ಸೃಷ್ಟಿಗೊಂಡಿದ್ದಾವೆ. ಈ ವಿವಿಧ ಸ್ಥೂಲ-ಸೂಕ್ಷ್ಮದೇಹಗಳಲ್ಲಿ ಅಭಿಮಾನದಿಂದ ಅಂದರೆ 'ನಾನು' ಎಂಬ ಭಾವದಿಂದ ಈಶ್ವರನೇ 'ಜೀವ' ರ ರೂಪದಲ್ಲಿ ಅವರ ಪ್ರಾರಬ್ಧ-ಕರ್ಮಗಳಿಗನುಸರಿಸಿ ಸುಖ ದುಃಖಗಳನ್ನು ಅನುಭವಿಸುತ್ತಿದ್ದಾನೆ.

**ಓ.ಸಂ.70 :** ಹೀಗೆ ಆತ್ಮನು ತಾನೇ ಕಾರ್ಯರೂಪದ ದೇಹೋಪಾಧಿಯೆಂಬ ತಪ್ಪು-ಗ್ರಹಿಕೆಯಿಂದ ಸರ್ವ ವ್ಯವಹಾರವನ್ನೂ 'ಜೀವ'ನಾಗಿ ನಡೆಸಲು ಶಕ್ಯನಾಗಿದ್ದಾನೆ. ಆತ್ಮನು ತಾನು 'ಜೀವ'ನಲ್ಲವೆಂದು ತಿಳಿದಿದ್ದರೂ ತಿಳಿಯದಿರುವನಂತೆ 'ಜೀವ'ನಾಗಿ ಸುಖ ದುಃಖಗಳನ್ನು ಅಜ್ಞನಾಗಿ ಅನುಭವಿಸುತ್ತಿದ್ದಾನೆ.

**ವಿವರಣೆ :** ಹೀಗೆ ಆತ್ಮನು ಕಾರಣೋಪಾಧಿಯಾದ ಮಾಯೆಯಿಂದ ಈಶ್ವರನಾಗಿದ್ದವನು, ಕಾರ್ಯೋಪಾಧಿಯಿಂದ ಜಗತ್ತಾಗಿಯೂ ಮತ್ತು ದೇಹೋಪಾಧಿ 'ಜೀವ'ನಾಗಿಯೂ ಕಾಣುತ್ತಿದ್ದಾನೆ. 'ಜೀವ'ನಿಗೆ ತಾನೇ ಈ ದೇಹವೆಂದು ತಪ್ಪು ತಿಳುವಳಿಕೆ ಆಗದಿದ್ದರೆ ಯಾವ ವ್ಯವಹಾರವೂ ಸಾಧ್ಯವಾಗದು. ಆದುದರಿಂದ ಇಹ-ಪರಗಳು ಸೇರಿದಂತೆ 'ಜೀವ' ನ ಜನ್ಮಾಂತರ ವ್ಯವಹಾರವೂ ಕೂಡ ಅವನ ದೇಹೋಽಹಂ ಭಾವವಿರುವಾಗಲೇ

ನಡೆಯಬೇಕಾಗುತ್ತದೆ. ಈ ಅವಧಿಯಲ್ಲಿ ಅವನು ತಾನು ಆತ್ಮನೆಂದು ಮರೆತು ವ್ಯವಹರಿಸಬೇಕಾಗುತ್ತದೆ. ಆದರೆ ಇದು ಅವನ ಅವಿಚಾರಾವಸ್ಥೆಯು ಆಗಿದ್ದು ತಾನು ಯಾರೆಂದು ವಿಚಾರ ಮಾಡಿದಾಗ ಈ ದೇಹವು ತಾನಲ್ಲವೆಂದೂ ಹಾಗೂ ತಾನು ಆತ್ಮನಾಗಿ ಬೇರೆಯೇ ಇದ್ದಾನೆಂದೂ ತಿಳಿಯುತ್ತದೆ. ಈ ತನ್ನ ದೇಹವು ಜಡವೆಂದೂ ಹಾಗೂ ಇದನ್ನು ತಿಳಿಯುವವನಾದ ತಾನು ಚೈತನ್ಯನಿರಲೇಬೇಕೆಂದು ತಿಳಿಯುತ್ತಾನೆ. ಜಾಗ್ರತಾವಸ್ಥೆಯಲ್ಲಿ ಮಾತ್ರ 'ನಾನು' ಎಂದು ತೋರುವ ಈ ಜಡ ದೇಹವು ಬೇರೆ ಮತ್ತು ಮೂರೂ ಅವಸ್ಥೆಗಳನ್ನು 'ಸಾಕ್ಷಿ' ಯಾಗಿ ನೋಡುತ್ತಿರುವ ಚೈತನ್ಯ ಸ್ವರೂಪದ ಆತ್ಮನಾದ ಆ 'ನಾನು' ಬೇರೆ . ಹೀಗೆ ಆತ್ಮನನ್ನು ತಿಳಿದೂ ತಿಳಿಯದೇ ಇರುವುದೇ ಮೊದಲನೆಯ ದೋಷವಾದ ಆವರಣವು. ಇಲ್ಲಿಗೆ ದೀರ್ಘವಾಗಿ ಚರ್ಚಿಸಲ್ಪಟ್ಟ ಆತ್ಮಾವರಣವು ಮುಕ್ತಾಯಗೊಳ್ಳುತ್ತದೆ.

**ಓ.ಸಂ.71 :** ತನ್ನ ನಿಜ ಸ್ವರೂಪವನ್ನೇ ಮುಚ್ಚಿ ಹಾಕುವ ಈ ಅವಿದ್ಯೆಯಿಂದಲೇ ಸಕಲ ಅನರ್ಥಗಳೂ ಪ್ರಾಪ್ತವಾಗುತ್ತವೆ.

**ವಿವರಣೆ :** ಈ ಓವೀಯಲ್ಲಿ ಅನಾದಿ ಅವಿದ್ಯೆಯು ಆತ್ಮನ ಸ್ವರೂಪವನ್ನು ಮುಚ್ಚಿ ಹಾಕುವುದೆಂಬ ಆತ್ಮನ ಮೇಲಿರುವ ಅದರ ಪ್ರಥಮ ಆವರಣದಿಂದಲೇ ಅದು ದ್ವಿತೀಯ ಮತ್ತು ತೃತೀಯ ಆವರಣಗಳಿಗೆ ಕಾರಣವಾಗಿರುತ್ತದೆಂದು ತಿಳಿಸಲಾಗಿದೆ. ತಾನು ನಿಜವಾಗಿ ಯಾರೆಂದು ತಿಳಿಯದ ಹೊರತು ತನ್ನನ್ನು ತಾನು ಇನ್ನೊಂದೆಂದು ಭ್ರಮಿಸಲು ಸಾಧ್ಯವಾಗುವುದಿಲ್ಲ. ಅಂದರೆ ತನ್ನನ್ನು ತಾನು ಆತ್ಮನೆಂದು ತಿಳಿದುಕೊಳ್ಳದಿದ್ದರೆ ಆಗ ತಾನು ತನ್ನನ್ನು ತಪ್ಪಾಗಿ ದೇಹವೆಂದು ಭ್ರಮಿಸುತ್ತಾನೆ. ಇದನ್ನೇ ಆತ್ಮನ ಮೇಲಿರುವ ದ್ವಿತೀಯ ಆವರಣವಾದ 'ವಿಕ್ಷೇಪ' ವೆಂದು ಕರೆಯುತ್ತಾರೆ. ಇದರಿಂದ ಆತ್ಮನ ಮೇಲಿರುವ ಮೂರನೆಯ ಆವರಣವಾದ 'ಮಲ' ವು ಇರಲು ಸಾಧ್ಯವಾಗುತ್ತದೆ. 'ಮಲ' ವೆಂದರೆ 'ಜೀವ'ನಿಗೆ ಆಗುವ ಸಂಸಾರ ತಾಪತ್ರಯಾದಿಯಾಗಿ ಸಕಲ ಅನರ್ಥಗಳೂ ಬರುತ್ತವೆ. 'ಜೀವ' ನು ಮಾಡುವ ಸಕಲ ಪುಣ್ಯ-ಪಾಪ ಕರ್ಮಗಳೂ, ಜನ್ಮಾಂತರಗಳೂ ಹಾಗೂ ವಿವಿಧ ಭೋಗಗಳೂ ಬರುತ್ತವೆ.

**ಓ.ಸಂ.72 :** ತನ್ನನ್ನು ತಾನು ಬ್ರಹ್ಮ ( ಆತ್ಮ ) ನೆಂಬುದನ್ನು ಮರೆತ ತಕ್ಷಣ 'ಜೀವ'ನು ದೇಹೋಽಹಂ ಭಾವವನ್ನು ಹೊಂದಿ ತನ್ನನ್ನು ಕರ್ತೃವು ಹಾಗೂ ಭೋಕ್ತೃವು ಎಂದು

ತಿಳಿಯುವುದರಿಂದ ಸದಾ ಭೋಗವನ್ನು ಅನುಭವಿಸುವುದನ್ನೇ ಚಿಂತಿಸುತ್ತಾನೆ. ಇದರಿಂದ ಅವನ ಮನಸ್ಸಿಗೆ ಸಮಾಧಾನವೇ ಇರುವುದಿಲ್ಲ. ಇದೇ 'ವಿಕ್ಷೇಪ' ವೆಂಬ ಎರಡನೆಯ ಆತ್ಮಾವರಣವು.

**ವಿವರಣೆ :** ಮುಂದಿನ ಓವೀಯ ಪ್ರಥಮ ಎರಡು ಚರಣಗಳನ್ನು ಈ ಓವೀಯಲ್ಲೇ ತೆಗೆದುಕೊಂಡು ವಿವರಿಸಲಾಗಿದೆ. ಮೊದಲನೆಯ ಆವರಣದ ಪರಿಣಾಮವಾಗಿ ತನ್ನನ್ನು ತಾನು ಬ್ರಹ್ಮ(ಆತ್ಮ)ನೆಂಬುದನ್ನು ಮರೆಯುತ್ತಾನೆ. ಈ ಮೊದಲನೆಯ ಆವರಣದ ಪರಿಣಾಮವಾಗಿ ಎರಡನೆಯ ಆತ್ಮಾವರಣವು ಸೃಷ್ಟಿಯಾಗಿದ್ದು ತನ್ನನ್ನು ತಾನು ದೇಹವೆಂದು ಅನಾದಿ ಕಾಲದಿಂದ ಭಾವಿಸುವುದಲ್ಲದೇ ತನ್ನನ್ನು ತಾನು ತಪ್ಪಾಗಿ ಕರ್ತೃವೂ ಹಾಗೂ ಭೋಕ್ತ್ರವೂ ಎಂದು ಭಾವಿಸುತ್ತಾನೆ. ಏಕೆಂದರೆ ದೇಹ ಮನಸ್ಸುಗಳು ಸ್ವಾಭಾವಿಕವಾಗಿ ಹಸಿವು ನೀರಡಿಕೆಗಳಂತಹ ಅನೇಕ ಅವಶ್ಯಕತೆಗಳಿಂದ ಪೀಡಿತವಾಗಿರುತ್ತವೆ. ಆದುದರಿಂದ ಇವುಗಳ ಈಡೇರಿಕೆಗಾಗಿ ಬೇಕಾದ ಕ್ರಿಯೆಗಳನ್ನು ಮಾಡುವುದರಿಂದ ಉಂಟಾಗುವ ಭೋಗವನ್ನು ಪಡೆಯುವುದೇ ಸಕಲ 'ಜೀವಿ' ಗಳ ಚಿಂತೆಯಾಗಿರುತ್ತದೆ. ಈ ಪ್ರಯತ್ನವು ಜೀವಿತದ ಪೂರ್ಣ ಅವಧಿಯಲ್ಲಿರುತ್ತಿದ್ದು ಮುಗಿಯದೇ ನಿರಂತರವಿರುವುದರಿಂದ ಇದು ಜೀವಿಗಳ ಮನಸ್ಸಿನ ಸಮಾಧಾನವನ್ನು ಸದಾ ನಾಶಮಾಡುತ್ತಿರುತ್ತದೆ. ಈ ಸಂಸಾರದ ತೋರಿಕೆಯೇ 'ವಿಕ್ಷೇಪ' ವೆಂಬ ಎರಡನೆಯ ಆತ್ಮಾವರಣವು ಆಗಿರುತ್ತದೆ.

**ಓ.ಸಂ.73 :** ಹೀಗೆ ಪ್ರಥಮ ಮತ್ತು ದ್ವಿತೀಯ ಆವರಣಗಳಿಂದ 'ಜೀವ' ನು ತಾನು ಆತ್ಮನೆಂಬುದನ್ನು ಮರೆತು, ತಾನು ದೇಹವನ್ನು ಹೊಂದಿದ ಕರ್ತೃ ಹಾಗೂ ಭೋಕ್ತ್ರವೆಂಬುದನ್ನು ತಿಳಿದುಕೊಂಡು ಸದಾ ಭೋಗಕ್ಕಾಗಿ ಪರಿತಪಿಸುತ್ತಿರುವವನು ಆಗಿರುತ್ತಾನೆ. ಹೀಗೆ ಭೋಗವನ್ನು ಪಡೆಯಲು ಅವನು ಕಾಯಾ-ವಾಚಾ-ಮನಸಾ ಅನೇಕ ಕ್ರಿಯೆಗಳನ್ನು ಮಾಡುತ್ತಾನೆ.

**ವಿವರಣೆ :** ಈ ಓವೀಯ ಪ್ರಥಮ ಎರಡು ಚರಣಗಳನ್ನು ಹಿಂದಿನ ಓವೀಯಲ್ಲೇ ವಿವರಿಸಲಾಗಿದೆ. ಈ ಓವೀಯಲ್ಲಿ ಮೂರನೆಯ ದೋಷವಾದ 'ಮಲ' ವೆಂಬುದನ್ನು ವಿವರಿಸಲು ಪ್ರಾರಂಭಿಸಲಾಗಿದೆ. ಮೊದಲನೆಯ ದೋಷವಾದ 'ಆತ್ಮಾವರಣ' ದಿಂದ ತಾನು ಸತ್-ಚಿತ್-ಆನಂದ ಸ್ವರೂಪನೆಂಬುದನ್ನು ಮರೆತು ಹೋಗುತ್ತಾನೆ. ಎರಡನೆಯ ದೋಷವಾದ 'ವಿಕ್ಷೇಪ'

ದಿಂದ ತಾನು ಅಸತ್-ಜಡ-ದುಃಖ ಸ್ವರೂಪದ ದೇಹವೆಂದು ತಪ್ಪಾಗಿ ತಿಳಿದು ಸದಾ ಭೋಗಕ್ಕಾಗಿ ಪರಿತಪಿಸುತ್ತಿರುತ್ತಾನೆ. ಇದರ ಪರಿಹಾರಕ್ಕಾಗಿ ತನ್ನ ಕಾಯಾ-ವಾಚಾ-ಮನಸ್ಸಿನಿಂದ ಅಸಂಖ್ಯಾತ ಕ್ರಿಯೆಗಳನ್ನು ಮಾಡುತ್ತಲೇ ಇರುತ್ತಾನೆ. ದೈಹಿಕ ಕ್ರಿಯೆಯು (ಸ್ಥೂಲ) ನಡೆಯುವಾಗ ವಾಚಾ-ಮನಸಾ ಕ್ರಿಯೆಗಳೂ ಜೊತೆಗೂಡಬಹುದು. ಮುಂದಿನ ಓವೀಯಲ್ಲಿ ಈ ಕ್ರಿಯೆಗಳ ಪರಿಣಾಮಗಳನ್ನು 'ಮಲ' ದೋಷದ ವಿವರಣೆಗಾಗಿ ಕೊಡಲಾಗಿದೆ.

**ಓ.ಸಂ.74 :** ಹೀಗೆ 'ಜೀವ' ನು ಭೋಗಕ್ಕಾಗಿ ಅನೇಕ ಕ್ರಿಯೆಗಳನ್ನು ಮಾಡುವಾಗ ಅಸಂಖ್ಯಾತ ಪಾಪಗಳು ಉಂಟಾಗುತ್ತವೆ. ಇವುಗಳನ್ನೇ 'ಮಲ'ವೆಂದು ಕರೆಯುತ್ತಾರೆ. ಈ ಪಾಪಗಳ ರಾಶಿಯೇ ಮೂರನೆಯ ಆತ್ಮಾವರಣವಾದ 'ಮಲ'ವೆಂಬ ದೋಷವಾಗಿದೆ.

**ವಿವರಣೆ :** 'ಜೀವ' ನು ತನ್ನ ಮನೋ ವಾಕ್ ದೇಹಗಳಿಂದ ಭೋಗಕ್ಕಾಗಿ ಅನೇಕ ಕರ್ಮಗಳನ್ನು ಮಾಡುತ್ತಲೇ ಇರುತ್ತಾನೆ. ಒಳ್ಳೆಯದನ್ನು ಚಿಂತಿಸುವುದು, ಒಳ್ಳೆಯದನ್ನೇ ನುಡಿಯುವುದು, ಹಾಗೂ ಒಳ್ಳೆಯದನ್ನೇ ಮಾಡುವುದು ಧಾರ್ಮಿಕ ಕರ್ಮಗಳಾಗಿದ್ದು ಅವು ಪುಣ್ಯವನ್ನು ತಂದುಕೊಡುತ್ತವೆ. ಹಾಗೆಯೇ ಕೆಟ್ಟದ್ದನ್ನು ಚಿಂತಿಸುವುದು, ನುಡಿಯುವುದು ಮತ್ತು ಮಾಡುವುದು ಅಧಾರ್ಮಿಕ ಕರ್ಮಗಳಾಗಿದ್ದು ಅವು ಪಾಪವನ್ನು ಉಂಟುಮಾಡುತ್ತವೆ. ಪುಣ್ಯಾರ್ಜನೆಯಿಂದ 'ಜೀವ'ನು ಅನೇಕ ದೇವಲೋಕಗಳಲ್ಲಿ ಸುಖವನ್ನು ಅನುಭವಿಸುತ್ತಾನೆ. ಹಾಗೆಯೇ ಪಾಪದಿಂದ ಅನೇಕ ಕೀಳು ಯೋನಿಗಳಲ್ಲಿ ಹುಟ್ಟಿ ದುಃಖವನ್ನು ಅನುಭವಿಸುತ್ತಾನೆ. ಹೀಗೆ ಕ್ರಿಯೆಗಳಿಂದ ಅನೇಕ ಜನ್ಮಗಳಲ್ಲಿ ಹುಟ್ಟುವುದು, ಸಾಯುವುದು, ಅನಿವಾರ್ಯವಾಗುತ್ತದೆ. ಅಧ್ಯಾತ್ಮ ದೃಷ್ಟಿಯಿಂದ ನೋಡಿದಾಗ ಈ ಹುಟ್ಟು ಸಾವುಗಳನ್ನು ಹಾಗೂ ಈ ಪುಣ್ಯ ಪಾಪಗಳೆರಡನ್ನೂ ಪಾಪವೆಂದೇ ಪರಿಗಣಿಸಲಾಗಿದೆ. ಈ ಪಾಪರಾಶಿಯನ್ನೇ ಇಲ್ಲಿ 'ಮಲ'ವೆಂದು ಸಂಬೋಧಿಸಿದ್ದು ಇದು 'ಜೀವ' ನ ಆತ್ಮವನ್ನು ಆವರಿಸಿ ನಿರಂತರ ದುಃಖವನ್ನು ಅನುಭವಿಸುವಂತೆ ಮಾಡುತ್ತದೆ. ಇದೇ 'ಮಲ' ವೆಂಬ ಮೂರನೆಯ ದೋಷವಾದ ಆತ್ಮಾವರಣವಾಗಿದೆ.

**ಓ.ಸಂ.75 :** ಮೂರು ಆತ್ಮಾವರಣಗಳಿಗಿಂತ ಆತ್ಮನು ಅತೀತನಾಗಿ, ಅಂದರೆ ಭಿನ್ನನಾಗಿರುವುದರಿಂದ, ಅವನು ಶುದ್ಧನಾಗಿಯೇ ಇರುತ್ತಾನೆ. ಏಕೆಂದರೆ ಆತ್ಮನು ಅವುಗಳ

ಸಾಕ್ಷಿಯಾಗಿದ್ದು ಅವುಗಳನ್ನು ಪ್ರಕಾಶಿಸುವುದರಿಂದ ಅವುಗಳಿಂದ ಯಾವುದೇ ರೀತಿಯಲ್ಲಿ ಲೋಪ ಹೊಂದುವುದಿಲ್ಲ.

**ವಿವರಣೆ :** "ಘಟದ್ರಷ್ಟಾ ಘಟಾತ್ ಭಿನ್ನಃ" ಅಂದರೆ ಗಡಿಗೆಯನ್ನು ನೋಡುವವನು ಗಡಿಗೆಗಿಂತ ಭಿನ್ನವಾಗಿರಲೇಬೇಕು. ಇದರಂತೆ 'ಜೀವ' ಭಾವದಿಂದಿರುವ ಆತ್ಮನು ತನ್ನ ಈ ಮೂರು ಆವರಣಗಳನ್ನು ತಾನೇ ಸಾಕ್ಷಿಯಾಗಿ ನೋಡುತ್ತಿರುವನು. ಆದುದರಿಂದ ಅವನು ಅವುಗಳಿಂದ ಭಿನ್ನವಾಗಿಯೇ ಇರುತ್ತಾನೆ. ಆತ್ಮನು ಇರುವುದನ್ನೆಲ್ಲ ಪ್ರಕಾಶಿಸುವುದು ಅವನ ಸ್ವಭಾವವೇ ಆಗಿದ್ದು ಅದು ಅವನ 'ಕ್ರಿಯೆ'ಯಾಗುವುದಿಲ್ಲ. ಹೇಗೆಂದರೆ 'ಬೆಳಕು' ತನ್ನ ಸ್ವಭಾವದಿಂದಲೇ ಎಲ್ಲ ಕಡೆಗೆ ಪ್ರಸರಿಸುವುದರಿಂದ ನಮಗೆ ಕಾಣಲು ಸಾಧ್ಯವಾಗುತ್ತದೆ. ಆದರೆ ಅದು ಬೆಳಕಿನ ಕ್ರಿಯೆಯಾಗುವುದಿಲ್ಲ. ಆದರೆ 'ಜೀವ'ನು ತನ್ನ ದೃಷ್ಟಿಯಿಂದ, ಆತ್ಮವು 'ಜೀವ'ನ ಅವಸ್ಥೆಗಳನ್ನು ಹಾಗೂ ಆವರಣ ಕ್ರಿಯೆಗಳನ್ನು ನಿರಂತರವಾಗಿ ನೋಡುತ್ತಿರುವಂತೆ ತಿಳಿದು, ಆ ನೋಡುವ ಕ್ರಿಯೆಯನ್ನು ಆತ್ಮನ ಮೇಲೆ ಆರೋಪಿಸುತ್ತಿದ್ದಾನೆ. ಆದರೆ ಆತ್ಮನು ಮಾತ್ರ ಈ ಅವಸ್ಥೆಗಳಿಂದ ಮತ್ತು ಆವರಣತ್ರಯಗಳಿಂದ ಯಾವುದೇ ರೀತಿಯ ಲೋಪವನ್ನು ಹೊಂದಿ ಮಲಿನವಾಗುವುದಿಲ್ಲ. ಅವನು ಅವುಗಳಿಂದ ಅತೀತನಾಗಿಯೇ ಉಳಿದು ಶುದ್ಧನಾಗಿಯೇ ಸದಾ ಇರುತ್ತಾನೆ.

**ಓ.ಸಂ.76 :** 'ಜೀವ'ನಿಗೆ ತನ್ನ ಆವರಣತ್ರಯಗಳಿಂದ ಆತ್ಮನ ಸ್ವರೂಪವು ಯಥಾರ್ಥವಾಗಿ ಅಂದರೆ ಇದ್ದದ್ದು ಇದ್ದ ಹಾಗೇ ತೋರುವುದಿಲ್ಲ. ಈ ಅಸತ್ಯವಾದ ಹಾಗೂ ಅಶುದ್ಧವಾದ ಆವರಣತ್ರಯಗಳು ನಾಶವಾಗಿ ಹೋದಮೇಲೆ ಸತ್ಯವಾದ ಹಾಗೂ ಶುದ್ಧವಾದ ಆತ್ಮನು ತನಗೆ ತಾನೇ ಪ್ರಕಟನಾಗುತ್ತಾನೆ.

**ವಿವರಣೆ :** ತನ್ನ ಹಿಂದಿನ ಸಂಚಿತ ಕರ್ಮಗಳಿಂದ ಪಾಪ ಪುಣ್ಯಗಳನ್ನು ಅರ್ಜನೆ ಮಾಡಿ ಪ್ರಾರಬ್ಧ ಕರ್ಮದಿಂದ ಹಾಗೂ ವಾಸನೆಗಳಿಂದ ಅದಕ್ಕನುಗುಣವಾದ ಸುಖ ದುಃಖಗಳನ್ನು ಅನುಭವಿಸಲು ವರ್ತಮಾನ ದೇಹವನ್ನೇ ತಾನೆಂಬ ತಪ್ಪು-ಭಾವನೆಯಿಂದ 'ಜೀವ'ನು ಹುಟ್ಟಿರುತ್ತಾನೆ. ಅಶುದ್ಧವಾಗಿರುವ ಆವರಣತ್ರಯಗಳನ್ನು ತಾನೇ ಸೃಷ್ಟಿ ಮಾಡಿಕೊಂಡಿರುವುದರಿಂದ ಈ ಸತ್ಯವಲ್ಲದ ಹಾಗೂ ತ್ರಿಗುಣಾತ್ಮಕವಾಗಿರುವ ಆವರಣತ್ರಯಗಳು ಅವನಿಗೆ ಗಂಟು ಬೀಳುವುವು. ತಾನೇ ಅತ್ಮನೆಂಬುದನ್ನು

ಮರೆತಿರುವುದರಿಂದ ಅನಾದಿ ಅವಿದ್ಯೆಯೆಂಬ ಮೊದಲನೆಯ ಆವರಣವೂ, ತಾನು ದೇಹವೆಂಬ ಹಾಗೂ ಜಗತ್ತು ಸತ್ಯವೆಂಬ ಭಾವನೆಯು ಉಂಟಾಗಿರುವುದರಿಂದ ವಿಕ್ಷೇಪವೆಂಬ ಎರಡನೆಯ ಆವರಣವೂ ಮತ್ತು ಹುಟ್ಟು-ಸಾವುಗಳೆಂಬ ವಿಷ-ಚಕ್ರದಲ್ಲಿ ಸಿಕ್ಕಿರುವ ಸಂಸಾರವೆಂಬ ದುಃಖವನ್ನು ಅನುಭವಿಸುವ ಮಲವೆಂಬ ಮೂರನೆಯ ಆವರಣವೂ ಸೃಷ್ಟಿಯಾಗಿರುತ್ತವೆ. ತಾನು ಬ್ರಹ್ಮನೆಂಬ ಜ್ಞಾನವು ತನಗೆ ಬಂದ ಕೂಡಲೇ ಈ ಆವರಣಗಳು ನಾಶವಾಗಿ ಸತ್ಯವಾದ ಹಾಗೂ ಶುದ್ಧವಾದ ಆತ್ಮನು ತನಗೆ ತಾನೇ ಪ್ರಕಟನಾಗುವನು. ದೀಪದಂತೆ ಸ್ವಯಂಪ್ರಕಾಶಿಸುವ ಆತ್ಮನು ಯಾವ ವಿಘ್ನಗಳೂ ಇರದಿದ್ದಾಗ ತನಗೆ ತಾನೇ ಪ್ರಕಟನಾಗುತ್ತಾನೆ.

<u>ಓ.ಸಂ.77 :</u> 'ಅಹಂ ಬ್ರಹ್ಮಸ್ಫುರಣ; ವು ( 'ನಾನು ಬ್ರಹ್ಮನಿದ್ದೇನೆ' ಎಂಬ ಜ್ಞಾನವು ) ಉದ್ಭವವಾದ ಪರಿಣಾಮವಾಗಿ ಅವಿದ್ಯೆ ಮೊದಲಾದ ಆವರಣತ್ರಯಗಳು ನಾಶವಾಗುತ್ತವೆ. ಸಾಪೇಕ್ಷವಾದ ಇವು ನಾಶವಾಗುವುದರಿಂದ ಇವುಗಳಿಗೆ ಸಾಪೇಕ್ಷವಾದ ಮತ್ತು ಜಡ ವೃತ್ತಿಯಾದ 'ಅಹಂ ಬ್ರಹ್ಮಸ್ಫುರಣ' ವೂ ಕೂಡ ನಾಶವಾಗಿ ಕೇವಲ ತಾನು ಮಾತ್ರ, 'ಇದ್ದೇನೆ' ಅಥವಾ 'ಇಲ್ಲ' ಎಂಬುದನ್ನು ಮೀರಿ ಉಳಿಯುತ್ತಾನೆ.

<u>ವಿವರಣೆ :</u> ಶ್ರವಣಾದಿ ಅಂತರಂಗ ಸಾಧನಗಳಿಂದ ಉದ್ಭವಿಸಿದ ಅಪರೋಕ್ಷ ಜ್ಞಾನವಾದ 'ಅಹಂ ಬ್ರಹ್ಮ ಸ್ಫುರಣವು' ಅವಿದ್ಯಾದಿ ದೋಷತ್ರಯಗಳನ್ನು ( ಆವರಣ ತ್ರಯಗಳನ್ನು ) ನಾಶಮಾಡಿ ಜೀವತ್ವವನ್ನು ನಿರಸನಗೊಳಿಸಿ 'ತಾನು ಬ್ರಹ್ಮ'ನೆಂಬ ಸತ್ಯವನ್ನು ಸಾಧಕನು ಕಂಡುಕೊಳ್ಳುತ್ತಾನೆ. ಆದರೆ 'ಜೀವ' ನ ಅವಿದ್ಯೆಯ ಅಪೇಕ್ಷೆಯಿಂದಲೇ ಜಗತ್ತನ್ನು ಸತ್ಯವೆಂದು ಭ್ರಮಿಸುವ ಹಾಗೂ ಈ ಜಗತ್ತಿಗೆ ಆಧಾರವಾದ ತಾನು ಬ್ರಹ್ಮನೆಂಬ ಕಲ್ಪನೆಗಳು ಉದ್ಭವಿಸುತ್ತವೆ. ಆದುದರಿಂದ ತಾನು ಬ್ರಹ್ಮನೆಂಬುದೂ ಕೂಡ 'ಜೀವ' ನ ಅವಿದ್ಯೆಯು ಇರುವುದರ ಅಪೇಕ್ಷೆಯ ಮೇರೆಗೆ ಸತ್ಯವಾಗಿರುತ್ತದೆ. ಹೀಗೆ ಸಾಪೇಕ್ಷವಾದ 'ತಾನು ಬ್ರಹ್ಮ' ನೆಂಬುದು ಕೂಡ ಅವಿದ್ಯಾನಾಶವಾದ ಕೂಡಲೇ ನಾಶವಾಗುತ್ತದೆ. ಹೀಗೆ ಜೀವ-ಜಗತ್ತು-ಬ್ರಹ್ಮಗಳು ಇಲ್ಲವಾಗಿ ಕೇವಲ ತಾನು ಮಾತ್ರ ಉಳಿಯುತ್ತಾನೆ. ಅಂದರೆ ನಾಮ-ರೂಪಾತ್ಮಕವಾದ ಇರುವಿಕೆ ಮತ್ತು ಇಲ್ಲದಿರುವಿಕೆಗಳೆಂಬ ದ್ವಂದ್ವವನ್ನು ಮೀರಿ ಕೇವಲ ತಾನೇ ತಾನಾಗಿ ಉಳಿಯುತ್ತಾನೆ.

**ಓ.ಸಂ.78 :** ಆದುದರಿಂದ ಆವರಣತ್ರಯಗಳು ಯಾವಾಗ ನಿಶ್ಶೇಷವಾಗಿ ನಾಶವಾಗುತ್ತವೋ ಆಗ ಕೂಡಲೇ ಚೈತನ್ಯ ಸ್ವರೂಪದ ಆತ್ಮನು ತಾನೇ ತಾನಾಗಿ ಪ್ರಕಟನಾಗುತ್ತಾನೆ.

**ವಿವರಣೆ :** ಈ ಓವೀಯಲ್ಲಿ ಆವರಣ ತ್ರಯಗಳ ಸಾಮಾನ್ಯ ನಿರೂಪಣೆಯನ್ನು ಸಮಾರೋಪ ಮಾಡಲಾಗಿದೆ. ಆವರಣ ತ್ರಯಗಳಿಂದ ಮುಸುಕಿದ ಆತ್ಮನು ತನ್ನನ್ನು ತಾನು ಪ್ರಕಟಮಾಡಿಕೊಳ್ಳುವುದಿಲ್ಲ. ಈ ಮೂರು ಆವರಣಗಳು ವಿಘ್ನಗಳಂತೆ ಕೆಲಸ ಮಾಡುವುದರಿಂದ ಇವುಗಳು ನಿವಾರಣೆಯಾದ ಕೂಡಲೇ ಆತ್ಮನು ತನ್ನ ಶುದ್ಧ ರೂಪದಿಂದ ತಾನೇ ತಾನಾಗಿ ಬೆಳಗುತ್ತಾನೆ. ಮೊದಲನೆಯ ಆವರಣವಾದ ಅವಿದ್ಯೆಯ ನಿವಾರಣೆಗಾಗಿ ತಾನು 'ದೇಹೋಽಹಂ' ಭಾವದ 'ಜೀವ'ನಲ್ಲ ಹಾಗೂ 'ತಾನು ಬ್ರಹ್ಮ ಸ್ವರೂಪನೇ' ಎಂಬ ಜ್ಞಾನವು ಬರಬೇಕಾಗುತ್ತದೆ. ಆದರೆ ಈ ಜ್ಞಾನವು ಸಾಪೇಕ್ಷವಾಗಿರುವುದರಿಂದ ಅವಿದ್ಯೆಯು ನಿವಾರಣೆಯಾದಕೂಡಲೇ ತಾನೂ ಕೂಡ ನಾಶವಾಗಿಬಿಡುತ್ತದೆ. ಹೀಗಾಗಿ ಆವರಣತ್ರಯಗಳು ನಾಶವಾದ ಕೂಡಲೇ ಜೀವ-ಜಗತ್ತು-ಬ್ರಹ್ಮನಾದಿಯಾಗಿ ಸಕಲವೂ ನಾಶವಾಗುತ್ತವೆ. ಆ ಕೂಡಲೇ ಅದ್ವಯ ಚೈತನ್ಯ ಸ್ವರೂಪದ ಆತ್ಮನು ತಾನೇ ತಾನಾಗಿ ಪ್ರಕಾಶಿಸುತ್ತಾನೆ.

**ಓ.ಸಂ.79 :** ವರ್ಣಾಶ್ರಮಕ್ಕೆ ಅನುಗುಣವಾಗಿರುವ ವೇದೋಕ್ತ ನಿಷ್ಕಾಮಕರ್ಮಗಳನ್ನು ಶ್ರದ್ಧೆಯಿಂದ ಮಾಡುವುದರಿಂದ 'ಮಲ' ವೆಂಬ ದೋಷವು ನಿಶ್ಚಯವಾಗಿ ನಿವಾರಣೆಯಾಗುತ್ತದೆ.

**ವಿವರಣೆ :** ಸನಾತನ ಧರ್ಮದಲ್ಲಿ ಪ್ರತಿಯೊಬ್ಬನೂ ತನ್ನದೇ ಆದ ವರ್ಣ ಹಾಗೂ ಆಶ್ರಮಗಳನ್ನು ಹೊಂದಿರುತ್ತಾನೆ. ವೇದೋಕ್ತವಾದ ಈ ವರ್ಣಾಶ್ರಮ ಪದ್ಧತಿಗೆ ಅನುಸರಿಸಿ ವೇದವು ನಿರೂಪಿಸಿದ ಆಯಾ ಮನುಷ್ಯರಿಗೆ ಪ್ರತ್ಯೇಕವಾಗಿ ಅನ್ವಯಿಸುವ ಅನೇಕ ಕರ್ಮಗಳಲ್ಲಿ ಕೇವಲ ನಿಷ್ಕಾಮ ಕರ್ಮಗಳನ್ನೇ ಆಯ್ದು ಅವುಗಳನ್ನು ಶ್ರದ್ಧೆಯಿಂದ ಮಾಡಬೇಕಾಗುತ್ತದೆ. ಆಗ 'ಮಲ'ವೆಂಬ ದೋಷವು ಇದರಿಂದ ನಿವಾರಣೆಯಾಗುತ್ತದೆ. 'ನಿಷ್ಕಾಮ ಕರ್ಮ'ವೆಂದರೆ ಯಾವ ಫಲಾಪೇಕ್ಷೆಯಿಲ್ಲದೆಯೇ ಕರ್ಮವನ್ನು ಶ್ರದ್ಧೆಯಿಂದ ಮಾಡುವುದಾಗಿರುತ್ತದೆ. ನಿತ್ಯ ನೈಮಿತ್ತಿಕ ಪ್ರಾಯಶ್ಚಿತ್ತ ಕರ್ಮಗಳನ್ನು ನಿಷ್ಕಾಮ-ಕರ್ಮಗಳ ಸಾಲಿಗೆ ಸೇರಿಸಬಹುದು. ಏಕೆಂದರೆ ಅವುಗಳಿಗೆ ವೇದದಲ್ಲಿ ಫಲವನ್ನೇ ಹೇಳಿರುವುದಿಲ್ಲ. ಇವುಗಳನ್ನು ಆಚರಿಸುವುದರಿಂದ ಕರ್ತೃವಿನ ಸಂಚಿತ ಪಾಪಗಳು ನಾಶಹೊಂದುತ್ತವೆ. ಇದರಿಂದ ಕರ್ತೃವಿಗೆ ಚಿತ್ತಶುದ್ಧಿಯ

ಮೂಲಕ ಜ್ಞಾನ ಲಭಿಸಿ ದುಃಖ ನಾಶವಾಗುತ್ತದೆ. ಮುಂದಿನ ಅಧ್ಯಾಯದಲ್ಲಿ ಕರ್ಮದ ಬಗ್ಗೆ ವಿಶೇಷವಾದ ನಿರೂಪಣೆಯಿರುತ್ತದೆ.

**ಓ.ಸಂ.80 :** ನಿಷ್ಕಾಮ ಕರ್ಮಾಚರಣೆಯ ಜೊತೆಗೆ ವೇದೋಕ್ತವಾದ ಉಪಾಸನೆಗಳನ್ನು ಮಾಡುವುದರಿಂದ 'ವಿಕ್ಷೇಪ' ವೆಂಬ ದೋಷವು ನಿವಾರಣೆಯಾಗುತ್ತದೆ. ಇದರಿಂದ ವಿವೇಕಾದಿ ಸಾಧನ ಚತುಷ್ಟಯಗಳು ಸಹಜವಾಗಿಯೇ ಅವಗತವಾಗುತ್ತವೆ.

**ವಿವರಣೆ :** ವೇದಗಳಲ್ಲಿ ಕರ್ಮಕಾಂಡದ ನಂತರ ಬರುವ ಉಪಾಸನಾ ಕಾಂಡದಲ್ಲಿ ಹೇಳಲ್ಪಟ್ಟ ಅನೇಕ ಉಪಾಸನೆಗಳಲ್ಲಿ ಬೇಕಾದ ಒಂದನ್ನು ಆರಿಸಿಕೊಂಡು ಜೀವನ-ಪೂರ್ತಿ ಅದನ್ನೇ ಬಿಡದಂತೆ ಅಭ್ಯಾಸ ಮಾಡಬೇಕು. ಇದರಿಂದ ಉಪಾಸ್ಯ ದೇವತೆಯ ಬಗ್ಗೆ ಏಕಾಗ್ರತೆಯು ಮೂಡಿ ಉಪಾಸಕನ ಪ್ರತಿಯೊಂದು ಆಗು-ಹೋಗುಗಳಿಗೂ ಉಪಾಸ್ಯ-ದೇವತೆಯೇ ಕಾರಣವೆಂದು ಉಪಾಸಕನು ತಿಳಿಯುತ್ತಾನೆ. ಹೀಗೆ ಉಪಾಸ್ಯ ದೇವತೆಯು ಉಪಾಸಕನ ನಿಯಾಮಕನಾಗಿದ್ದು, ಉಪಾಸಕನಲ್ಲಿ ಕರ್ತೃತ್ವ ಹಾಗೂ ಭೋಕ್ತೃತ್ವಗಳೂ ಕೂಡ ಉಪಾಸ್ಯದೇವತೆಯ ಅಧೀನವಾಗಿರುವುದರಿಂದ ಅವನ 'ವಿಕ್ಷೇಪ' ವೆಂಬ ದೋಷವು ನಾಶವಾಗುತ್ತದೆ. ಹೀಗೆ ನಿಷ್ಕಾಮಕರ್ಮದಿಂದ ಚಿತ್ತಶುದ್ಧಿಯೂ, ಉಪಾಸನೆಯಿಂದ ಚಿತ್ತದ ಏಕಾಗ್ರತೆಯೂ ಲಭಿಸಿ ಅವನು ವಿವೇಕ-ವೈರಾಗ್ಯ-ಶಮದಮಾದಿ ಷಟ್ಕ ಮತ್ತು ಮುಮುಕ್ಷುತ್ವಗಳೆಂಬ ಸಾಧನ-ಚತುಷ್ಟಯ-ಸಂಪನ್ನನಾಗಿ ಜ್ಞಾನಕ್ಕೆ ಅಧಿಕಾರಿಯಾಗುತ್ತಾನೆ. ಈ ಸಾಧನ-ಚತುಷ್ಟಯಗಳನ್ನೇ ಈ ಅಧ್ಯಾಯದ ಕೊನೆಯವರೆಗೂ ವಿವರಿಸಲಾಗಿದೆ.

**ಓ.ಸಂ.81 :** ನಿಷ್ಕಾಮ ಕರ್ಮ ಮತ್ತು ಉಪಾಸನೆಗಳಿಂದ ಸಾಧಕನಿಗೆ ಸ್ಥಿರ ಚಿತ್ತವು ಉಂಟಾಗುತ್ತದೆ. ಇದರಿಂದ ಅವನು ನಿತ್ಯ-ಅನಿತ್ಯದ ಬಗ್ಗೆ ವಿಚಾರಮಾಡಿದಾಗ ಆತ್ಮನು ನಿತ್ಯ ಹಾಗೂ ಜಗತ್ತು ಅನಿತ್ಯವಾಗಿದೆ ಎಂಬ ವಿವೇಕವನ್ನು ಪಡೆಯುತ್ತಾನೆ.

**ವಿವರಣೆ :** ಈ ಓವೀ ಹಾಗೂ ಮುಂದಿನ ಓವೀಗಳಲ್ಲಿ ಸಾಧನ-ಚತುಷ್ಟಯದಲ್ಲಿ ಮೊದಲನೆಯದಾದ 'ವಿವೇಕ'ದ ಬಗ್ಗೆ ವಿವರಿಸಲಾಗಿದೆ. ವರ್ಣಾಶ್ರಮ ಧರ್ಮಕ್ಕನುಗುಣವಾದ ನಿಷ್ಕಾಮ ಕರ್ಮಗಳನ್ನು ಹಾಗೂ ಉಪಾಸನೆಗಳನ್ನು ಶ್ರದ್ಧೆಯಿಂದ ಆಚರಿಸಿದಾಗ ಕ್ರಮೇಣ

ಚಿತ್ತಶುದ್ಧಿಯು ಹಾಗೂ ಚಿತ್ತದ ಏಕಾಗ್ರತೆಯು ಸಾಧಕನಿಗೆ ಪ್ರಾಪ್ತಿಯಾಗುತ್ತದೆ. ಇದರಿಂದ ಸಾಧನ-ಚತುಷ್ಟಯಗಳೂ ಸಾಧಕನಿಗೆ ಅವಗತವಾಗುತ್ತವೆ. ಇದರಲ್ಲಿ ಮೊದಲನೆಯದೇ 'ವಿವೇಕ'ವು. ನಿತ್ಯವು ಯಾವುದು ಮತ್ತು ಅನಿತ್ಯವು ಯಾವುದು ಎಂಬುದನ್ನು ವಿಚಾರಮಾಡಿ ನಿಶ್ಚಯಿಸುವುದೇ ವಿವೇಕವು. "ನಿತ್ಯಾನಿತ್ಯವಸ್ತು ವಿವೇಕಃ" ಎಂದು ಶ್ರೀ ಶಂಕರರು ಹೇಳಿದ್ದಾರೆ. ಸಾಧಕನು ತನ್ನಲ್ಲೇ ವಿಚಾರ ಮಾಡಿ ಚೈತನ್ಯ ಸ್ವರೂಪದ ಆತ್ಮನು ಮಾತ್ರ ನಿತ್ಯವಿರಲು ಸಾಧ್ಯವಿರುತ್ತದೆ ಎಂದೂ ಮತ್ತು ಜಡ ಜಗತ್ತು ಅನಿತ್ಯವಾಗಿದೆ ಎಂದೂ ನಿರ್ಣಯಕ್ಕೆ ಬರುತ್ತಾನೆ. ಮುಂದಿನ ಓವೀಯ ಪ್ರಥಮ ಚರಣವನ್ನು ಈ ಓವೀಯಲ್ಲೇ ವಿವರಿಸಲಾಗಿದೆ.

**ಓ.ಸಂ.82 :** ಸಾಧನ ಚತುಷ್ಟಯದಲ್ಲಿ ವಿವೇಕವೆಂಬುದು ಬಹಳ ಮುಖ್ಯವಾಗಿರುತ್ತದೆ. ಏಕೆಂದರೆ ಇದರಿಂದ ಉಳಿದ ಸಾಧನಗಳು ತಮಗೆ ತಾವೇ ಉದ್ಭವಿಸುವವು.

**ವಿವರಣೆ :** ಈ ಓವೀಯ ಪ್ರಥಮ ಚರಣವನ್ನು ಹಿಂದಿನ ಓವೀಯಲ್ಲಿಯೇ ವಿವರಿಸಲಾಗಿದೆ. ಸಾಧನ ಚತುಷ್ಟಯಗಳಲ್ಲಿ ಮೊದಲನೆಯ ಸಾಧನವಾದ ವಿವೇಕವೂ ಅತ್ಯಂತ ಮುಖ್ಯವಾಗಿರುವುದು. ಏಕೆಂದರೆ ವಿವೇಕವೆಂದರೆ ಯಾವುದು, ನಿತ್ಯವೆಂದರೆ ಯಾವುದು ಹಾಗೂ ಅನಿತ್ಯವೆಂದರೆ ಯಾವುದು ಎಂಬುವುದು ವಿಮರ್ಶಾತ್ಮಕ ಜ್ಞಾನವಾಗಿದ್ದು ಇದು ಇಲ್ಲದೇ ಬೇರೆ ಸಾಧನಗಳು ಉದ್ಭವಿಸಲಾರವು. ಚೇತನ ಸ್ವರೂಪದ ಆತ್ಮನೊಬ್ಬನನ್ನು ಬಿಟ್ಟರೆ ಉಳಿದ ಎಲ್ಲವೂ ಜಡಸ್ವರೂಪವಾಗಿದ್ದು ಅನಿತ್ಯವಾಗಿವೆ ಮತ್ತು ಚೇತನಗಳಲ್ಲಿ ಅನೇಕತ್ವವಿರದೇ ಆತ್ಮನೊಬ್ಬನೇ ನಿತ್ಯನು ಎಂಬ ಸತ್ಯವು ವಿವೇಕಿಗೆ ತಿಳಿದಿರುತ್ತದೆ. ಆದುದರಿಂದ ಅವನು ಸುಲಭವಾಗಿ ಅನಿತ್ಯವಾದ ಈ ಜಗತ್ತಿನ ಸುಖವನ್ನು ತ್ಯಾಗ ಮಾಡುವುದಕ್ಕೂ ( ವೈರಾಗ್ಯ) ಹಾಗೂ ಆತ್ಮನ ಸಾಕ್ಷಾತ್ಕಾರವೇ ಜೀವನದ ಮುಖ್ಯ ಗುರಿ ಎಂಬ ಆಕಾಂಕ್ಷೆಯನ್ನು (ಮುಮುಕ್ಷುತ್ವ) ಹೊಂದುವುದಕ್ಕೂ ಸಾಧ್ಯವಾಗಿರುತ್ತದೆ. ಹಾಗೆಯೇ ಶಮ-ದಮಾದಿ-ಷಟ್-ಸಂಪತ್ತುಗಳೂ ಕೂಡ ವಿವೇಕದ ಹಿನ್ನಲೆಯಲ್ಲಿಯೇ ಸಾಧಕನಿಗೆ ಸಿದ್ಧಿಯಾಗುತ್ತವೆ.

**ಓ.ಸಂ.83 :** ಜಡವಾದ ಅನಿತ್ಯವಸ್ತುಗಳು ಸದಾ ಪ್ರಾಪ್ತವಿರುವುದಿಲ್ಲ. ಅವುಗಳನ್ನು ಪ್ರಾಪ್ತ ಮಾಡಿಕೊಳ್ಳಬೇಕಾದರೂ ಸಾಕಷ್ಟು ದುಃಖವನ್ನು ಅನುಭವಿಸಬೇಕಾಗುವುದು. ಒಂದು ವೇಳೆ ಅವು ಪ್ರಾಪ್ತವಾದರೂ ಅವು ನಾಶವಾದೀತೆಂಬ ಭಯ ಕಾಡುತ್ತದೆ.

**ವಿವರಣೆ :** ಈ ಓವೀಯಿಂದ ವೈರಾಗ್ಯವೆಂಬ ಎರಡನೆಯ ಸಾಧನೆಯನ್ನು ವಿವರಿಸಲು ಉಪಕ್ರಮಿಸಲಾಗಿದೆ. ಅನೇಕತೆಯು ಜಡ ವಸ್ತುಗಳಲ್ಲಿ ಮಾತ್ರ ಇದ್ದು ಒಂದೊಂದು ವಸ್ತುವನ್ನು ಪಡೆಯಲು ಬಹಳ ಕಷ್ಟಪಡಬೇಕಾಗುತ್ತದೆ. ಆತ್ಮನಂತೆ ಅದು ಸದಾ ಪ್ರಾಪ್ತವಲ್ಲ. ಹೀಗೆ ಪ್ರಾಪ್ತ ಮಾಡಿಕೊಳ್ಳಲು ಸಾಕಷ್ಟು ದುಃಖವನ್ನು ಅನುಭವಿಸಬೇಕಾಗುತ್ತದೆ. ಒಂದು ವೇಳೆ ಆ ಅನಿತ್ಯ ವಸ್ತುವನ್ನು ಪ್ರಾಪ್ತಿ ಮಾಡಿಕೊಂಡರೂ ಕೂಡ ಅದು ಯಾವುದೇ ಕಾಲದಲ್ಲಿ ನಾಶಹೊಂದಬಹುದಾದ್ದರಿಂದ ಅದರ ಬಗ್ಗೆ ನಮಗೆ ಅನಿವಾರ್ಯವಾಗಿ ಭಯ ಚಿಂತನೆಗಳು ಕಾಡುತ್ತವೆ. ಉದಾಹರಣೆಗೆ, ಒಂದು ಟಿ.ವಿ.ಯನ್ನು ಹೊಸದಾಗಿ ಕೊಳ್ಳಬೇಕಾದರೆ ಅದಕ್ಕೆ ಬೇಕಾದ ಹಣವನ್ನು ಹೇಗಾದರೂ ಸಂಗ್ರಹಿಸಬೇಕಾಗುತ್ತದೆ. ಕೆಲವರಿಗೆ ಇದು ಸಾಧ್ಯವಾಗುವುದಿಲ್ಲ. ಒಂದುವೇಳೆ ಅದನ್ನು ಕೊಳ್ಳಲು ಸಾಧ್ಯವಾದರೂ ಕೂಡ ಅದನ್ನು ತಂದ ಮೇಲೆ ಅದು ಪುನಃ ಕೆಟ್ಟು ಹೋಗಬಹುದು; ಇಲ್ಲವೇ ಅನೇಕ ಕಾರಣಗಳಿಂದ ಅದು ನಾಶವಾಗಬಹುದೆಂಬ ಭಯ ಹಾಗೂ ಚಿಂತೆ ಸದಾ ಕಾಡುತ್ತಿರುತ್ತದೆ.

**ಓ.ಸಂ.84 :** ಅನಿತ್ಯ ವಸ್ತುವು ಪ್ರಾಪ್ತವಾದರೂ ಕೂಡ ಅದರ ರಕ್ಷಣೆಯ ಚಿಂತೆಯು ಕೊನೆಯ ತನಕ ಕಾಡುತ್ತದೆ. ಕೊನೆಗೆ ಆ ವಸ್ತುವೂ ಕೂಡ ಎಲ್ಲ ಜಡ ವಸ್ತುಗಳಂತೆ ನಾಶವಾಗುತ್ತದೆ. ಆಗ ಸಹಿಸಲಸಾಧ್ಯವಾದ ದುಃಖ ಉಂಟಾಗುತ್ತದೆ.

**ವಿವರಣೆ :** ಈ ಓವೀಯು ಹಿಂದಿನ ಓವೀಯ ಮುಂದುವರಿದ ಭಾಗವಾಗಿದೆ. ಹಿಂದಿನ ಓವೀಯಲ್ಲಿ ಯಾವುದೇ ಜಡ ವಸ್ತುವನ್ನು ಪ್ರಾಪ್ತ ಮಾಡಿಕೊಳ್ಳಲು ಎಷ್ಟೊಂದು ದುಃಖ ಉಂಟಾಗುತ್ತದೆ ಹಾಗೂ ಅದು ಯಾವುದೇ ಕ್ಷಣದಲ್ಲಿ ನಾಶವಾಗಬಹುದೆಂಬ ಭೀತಿಯು ನಮ್ಮನ್ನು ಆವರಿಸುತ್ತದೆ ಎಂದು ತಿಳಿಸಲಾಗಿದೆ. ಆದುದರಿಂದ ಈ ಓವೀಯಲ್ಲಿ ಯಾವುದೇ ಪ್ರಾಪ್ತವಾದ ವಸ್ತುವಿನ ರಕ್ಷಣೆಯ ಚಿಂತೆಯು ನಮ್ಮನ್ನು ಬೆಂಕಿಯಂತೆ ಸುಡುತ್ತಿರುತ್ತದೆ. ಹೀಗೆ ಎಷ್ಟೇ ಪ್ರಯತ್ನಪಟ್ಟರೂ ಉಳಿದ ಜಡ ವಸ್ತುವಿನಂತೆ ಆ ವಸ್ತುವೂ ನಾಶವಾಗಲೇಬೇಕಾಗುತ್ತದೆ. ಆಗ ಅತೀವ ದುಖ ಉಂಟಾಗುವುದು ಅನಿವಾರ್ಯವಾಗುತ್ತದೆ. ಕೊಂಡ ಟಿ.ವಿ.ಯನ್ನು ಹೇಗೆ/ಎಷ್ಟು ರಕ್ಷಣೆ ಮಾಡಿದರೂ ಕೂಡ ಒಮ್ಮೆ ವೋಲ್ಟೇಜ್ ಹೆಚ್ಚಾಗಿ ಬಂತೆಂದರೆ ಟಿ.ವಿ. ಸುಟ್ಟುಹೋಗಿ ಬಹಳ ದುಃಖವಾಗುತ್ತದೆ.

**ಓ.ಸಂ.85 :** ಆದುದರಿಂದ ಅನಿತ್ಯವಾಗಿರುವುದು ಸ್ವರೂಪತಃ ದುಃಖರೂಪವಾಗಿರುತ್ತದೆ. ಹಾಗೆಯೇ ನಿತ್ಯವಾದದ್ದು ಸುಖರೂಪವಾಗಿರುವುದು ನಿಶ್ಚಯವಾಗಿದೆ. ಇದನ್ನು ತಿಳಿದಾಗ ಅನಿತ್ಯ ಭೋಗಕ್ಕಾಗಿರುವ ವಿಷಯಗಳಲ್ಲಿ ತುಚ್ಛ ಬುದ್ಧಿಯು ಉಂಟಾಗುವುದು.

**ವಿವರಣೆ :** ಸೈದ್ಧಾಂತಿಕವಾಗಿ ಹೇಳುವುದಾದರೆ ಅನಿತ್ಯವಸ್ತುಗಳೆಲ್ಲ ದುಃಖಕಾರಕವಿರುತ್ತವೆ. ಏಕೆಂದರೆ ಅನಿತ್ಯ ವಸ್ತುಗಳೆಲ್ಲವೂ ನಾಶವಾಗುವಂತಹುಗಳೇ ಇರುವುದರಿಂದ ಅವು ಅಭಿಮಾನವಿರುವವನಲ್ಲಿ ದುಃಖವನ್ನು ಉಂಟುಮಾಡುವುದು ಸಹಜವಿರುತ್ತದೆ. ಹಾಗೆಯೇ ನಿತ್ಯವೆಂಬ ಏಕೈಕ ಚೈತನ್ಯ-ಸ್ವರೂಪದ ಆತ್ಮವು ಅಮಿತಾನಂದಕ್ಕೆ ಕಾರಣವಾಗಿರುವುದೆಂದು ತಿಳಿದುಕೊಂಡರೆ ಆಗ ಅನಿತ್ಯವಾಗಿರುವ ವಿಷಯ-ಭೋಗಗಳಲ್ಲಿ ಜಿಗುಪ್ಸೆಯು ಉಂಟಾಗುತ್ತದೆ. ನಂತರ ಮೊದಲಿನಂತೆ ಮನಸ್ಸು ಈ ವಿಷಯ ಭೋಗಗಳಲ್ಲಿ ಆಸಕ್ತಿಯನ್ನು ಹೊಂದುವುದಿಲ್ಲ. ಆದುದರಿಂದ ವಿವೇಕವು ಜಾಗ್ರತವಾದ ಸಾಧಕನಿಗೆ ಆತ್ಮವಸ್ತುವಿನಲ್ಲಿ ಮೋಹ ಹಾಗೂ ವಿಷಯ ಭೋಗಗಳಲ್ಲಿ ಹೇಯ ಬುದ್ಧಿಯು ಸ್ವಾಭಾವಿಕವಾಗಿರುತ್ತವೆ.

**ಓ.ಸಂ.86:**ಈ ಲೋಕದ ಹಾಗೂ ಪರಲೋಕದ ಭೋಗಗಳಿಗಾಗಿ ("ಇಹಾಮುತ್ರಫಲಭೋಗ"– ವಿವೇಕಚೂಡಾಮಣಿ, ಶ್ಲೋಕ:19) ಸಾಮಾನ್ಯ ಜನರು ಪ್ರಾಣವನ್ನು ಬಿಡಲೂ ಕೂಡ ತಯಾರಾಗುತ್ತಾರೆ. ಆದರೆ ವಿವೇಕಿಗಳಿಗೆ ಇದು ವಿಷಕ್ಕಿಂತಲೂ ಕನಿಷ್ಠವಾಗಿ ತೋರುತ್ತದೆ.

**ವಿವರಣೆ :** ಈ ಓವೀಯಲ್ಲಿ ಸಾಮಾನ್ಯ ಜನರಿಗೂ ಹಾಗೂ ವಿವೇಕಿಗಳಿಗೂ ಇರುವ ವ್ಯತ್ಯಾಸವನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಸಾಮಾನ್ಯ ಜನರು ಈ ಲೋಕದಲ್ಲಿ ಪಡೆಯಬಹುದಾದ ವಿಷಯ ಸುಖಗಳನ್ನೆಲ್ಲ ಪಡೆದರೂ ತೃಪ್ತರಾಗದೇ ಸತ್ತಮೇಲೆ ಸಿಗಬಹುದಾದ ಪರಲೋಕದ ಸುಖಕ್ಕಾಗಿ ಕಷ್ಟಪಡುತ್ತಾರೆ. ಇದಕ್ಕಾಗಿ ಅವರು ಅನೇಕ ಧಾರ್ಮಿಕ ವಿಧಿ-ವಿಧಾನಗಳನ್ನು ಅನುಸರಿಸುತ್ತಾರೆ. ಪರಲೋಕದ ಸುಖಕ್ಕಾಗಿ ಅವರು ಯಜ್ಞ-ಯಾಗಾದಿಗಳನ್ನೂ ಹಾಗೂ ಜಪ-ಪಾರಾಯಣಾದಿ ಅನೇಕ ಧಾರ್ಮಿಕ ಕರ್ಮಗಳನ್ನೂ ಮಾಡುತ್ತಾರೆ. ಆದರೆ ವಿವೇಕಿಗಳಿಗೆ ಈ ಲೋಕದ ಹಾಗೂ ಪರಲೋಕದ ಸುಖ ಭೋಗಗಳು ವಿಷಕ್ಕಿಂತಲೂ ಕನಿಷ್ಠ ಆಗಿ ಕಾಣುತ್ತವೆ. ಏಕೆಂದರೆ ಅವುಗಳೆಲ್ಲವೂ ಅನಿತ್ಯವಾಗಿದ್ದು

ನಾಶಹೊಂದುವುದು ನಿಶ್ಚಿತವಾಗಿರುತ್ತದೆ. ಅವರಿಗೆ ಆತ್ಮಾನಂದವನ್ನು ಪಡೆಯುವುದೇ ಜೀವನದ ಪರಮ ಗುರಿಯಾಗಿರುತ್ತದೆ.

**ಓ.ಸಂ.87 :** ವಿಷವು ಮನುಷ್ಯನನ್ನು ಒಮ್ಮೆಲೇ ಕೊಂದು ಹಾಕುತ್ತದೆ. ಆದರೆ ವಿಷಯ ಸುಖಾಸಕ್ತಿಯು ಅವನನ್ನು ಆಗಾಗ ಕೊಲ್ಲುತ್ತಿರುತ್ತದೆ. ವಿಷಯಕಾಮನೆಯಿಂದಲೇ ಮನುಷ್ಯನು ಅನೇಕ ನೀಚ ಯೋನಿಗಳಲ್ಲಿ ಹುಟ್ಟುತ್ತಾನೆ.

**ವಿವರಣೆ :** ಹಿಂದಿನ ಓವೀಯಲ್ಲಿ ವಿವೇಕಿಗಳಿಗೆ 'ವಿಷಯ-ಸುಖವು ವಿಷಕ್ಕಿಂತ ಕನಿಷ್ಠವಾಗಿ ತೋರುವುದು' ಎಂದು ಹೇಳಲಾಗಿದೆ. ಈ ಓವೀಯಲ್ಲಿ ಅದಕ್ಕೆ ಕಾರಣವನ್ನು ತಿಳಿಸಲಾಗಿದೆ. ವಿವೇಕೀ ಪುರುಷರ ಪ್ರಕಾರ ವಿಷವು ಮನುಷ್ಯನನ್ನು ಒಮ್ಮೆಲೇ ಕೊಂದು ಹಾಕುತ್ತದೆ. ಆದರೆ ವಿಷಯ-ಸುಖಕ್ಕಾಗಿ ಯಾವಾಗ ಮನಸ್ಸು ಚಂಚಲವಾಗುತ್ತದೋ ಆಗ ಅದಕ್ಕೆ 'ಸಾವು ಬಂದಂತೆ' ಎಂದು ತಿಳಿದುಕೊಳ್ಳಬೇಕು. ಏಕೆಂದರೆ ಮನುಷ್ಯನು ತನ್ನ ವಿಷಯಕಾಮನೆಗೆ ಅನುಗುಣವಾಗಿಯೇ ಅನೇಕ ನೀಚ ಯೋನಿಗಳಲ್ಲಿ ಹುಟ್ಟಿಬರುವ ದುಃಸ್ಥಿತಿಯು ಅವನಿಗೆ ಬರುತ್ತದೆ. ಈ ಕಾರಣದಿಂದಲೇ ವಿವೇಕೀ ಜನರು ವಿಷಯ-ಸುಖಗಳನ್ನು ವಿಷಕ್ಕಿಂತ ಕೀಳಾಗಿ ನೋಡುತ್ತಾರೆ.

**ಓ.ಸಂ.88 :** ಆದುದರಿಂದ ಈ ವಿಷಯಗಳು ವಿಷಕ್ಕಿಂತ ಹೇಯವೆಂದು ತಿಳಿದು ಮನಸ್ಸನ್ನು ಲೌಕಿಕದಿಂದ ಪರಮಾರ್ಥದ ಕಡೆಗೆ ಹೊರಳಿಸುವುದನ್ನು ವೈರಾಗ್ಯವೆಂದು ಕರೆಯುತ್ತಾರೆ.

**ವಿವರಣೆ :** ವಿವೇಕಿಗೆ ವಿಷಯ-ಸುಖವು ತಾತ್ಕಾಲಿಕವಾಗಿ ಸುಖಕಾರಕವೆಂದು ಅನ್ನಿಸಿದರೂ ಅದು ಕಾಲಾಂತರದಲ್ಲಿ ದುಃಖಕಾರಕೆಂದು ತಿಳಿದಿರುತ್ತದೆ. ಕರಿದ ತಿನಿಸುಗಳು ತಿನ್ನಲು ಆನಂದವೆನಿಸಿದರೂ ಕಾಲಾಂತರದಲ್ಲಿ ಅವು ಅನೇಕ ರೋಗಗಳನ್ನು ಹುಟ್ಟು ಹಾಕುತ್ತವೆ. ಅಲ್ಲದೇ ಅನೇಕ ವಿಷಯ-ಭೋಗಗಳು ಹಾಗೂ ಸಂಚಿತ ಕರ್ಮಗಳು ಅನೇಕ ಕೀಳು ಯೋನಿಗಳಲ್ಲಿ ಹುಟ್ಟಿ ದುಃಖವನ್ನು ಅನುಭವಿಸುವಂತೆ ಮಾಡುತ್ತವೆ. ಆದುದರಿಂದ ವಿವೇಕಿಯು ವಿಷಯ-ಸುಖ-ಭೋಗಗಳನ್ನು ವಿಷದಂತೆ ಹೇಯ ಬುದ್ಧಿಯಿಂದ ನೋಡಿ ಅವುಗಳ ಕಡೆಗೆ ಮನಸ್ಸು ಹೋಗುವುದರ ಬದಲು ಪರಮಾರ್ಥದ ಕಡೆಗೆ ( ಆತ್ಮಜ್ಞಾನವನ್ನು ಪಡೆಯುವ ಬಗ್ಗೆ ) ಯೋಚಿಸಲು ಪ್ರಾರಂಭಿಸುವನು. ಈ ರೀತಿ ಸಂಪೂರ್ಣವಾಗಿ ಸಾಧಕನು ಇಹ-ಪರ-

ಸುಖಗಳಿಂದ ವಿಮುಖವಾಗುವುದನ್ನೇ ವೈರಾಗ್ಯವೆನ್ನುತ್ತಾರೆ. "ಇಹಾಮುತ್ರಾರ್ಥ ಭೋಗ ವಿರಾಗಃ" - ಬ್ರ.ಸೂ.ಶಾಂ.ಭಾ.೧.೧.೧.೧

**ಓ.ಸಂ.89 :** ಸಂಪೂರ್ಣ ವೈರಾಗ್ಯ ಬರಬೇಕಾದರೆ ತನ್ನದೇ ಆದ ದೇಹ-ಪ್ರಾಣ-ಮನಸ್ಸು ಮುಂತಾದುವುಗಳ ಬಗ್ಗೆ ತಾತ್ಸಾರ ಭಾವನೆಯನ್ನು ಬೆಳೆಸಿಕೊಳ್ಳಬೇಕು. ಇದರಿಂದ ಹೆಂಡತಿ, ಮಕ್ಕಳು ಹಾಗೂ ಬಂಧು-ಬಾಂಧವರಲ್ಲಿ ಮೋಹವನ್ನು ಇಡಬಾರದೆಂದು ಸ್ಪಷ್ಟವಾಗಿ ಗೊತ್ತಾಗುತ್ತದೆ.

**ವಿವರಣೆ ಕೂಡ :** ಲೌಕಿಕ ವಿಷಯ ಭೋಗದಲ್ಲಿ ತ್ಯಾಗ ಬುದ್ಧಿಯು ಇರಬೇಕು ಎನ್ನುವುದರಲ್ಲಿ ಸಾಧಕನು ಮುಖ್ಯವಾಗಿ ತನ್ನದೇ ಆದ ದೇಹದ ಬಗ್ಗೆಯೂ ಯಾವುದೇ ಮೋಹವನ್ನು ಇಟ್ಟುಕೊಳ್ಳಬಾರದೆಂದು ಈ ಓವೀಯಲ್ಲಿ ತಿಳಿಸಲಾಗಿದೆ. ಇಲ್ಲಿ ದೇಹವೆಂದರೆ ದೇಹ-ಪ್ರಾಣ-ಮನಸ್ಸು-ಬುದ್ಧಿಗಳ ಸಂಕೀರ್ಣ ಜೋಡಣೆಯೇ ಆಗಿರುತ್ತದೆ. ಇದರಲ್ಲಿ ಸ್ಥೂಲ-ಸೂಕ್ಷ್ಮ-ಕಾರಣ ದೇಹಗಳೂ ಕೂಡಿ ದೇಹವೆಂದು ಹೇಳಲಾಗಿದೆ. ಈ ದೇಹವು ನಮಗೆ ಅನಿವಾರ್ಯವಾಗಿದ್ದರೂ ಕೂಡ ಅದರ ಅಭಿಮಾನವಾದ ಅಹಂಕಾರ ತತ್ತ್ವವು ಎಲ್ಲ ಅನರ್ಥಗಳಿಗೆ ಕಾರಣವಾಗಿರುತ್ತದೆ. ಏಕೆಂದರೆ ಅದಿರುವುದರಿಂದಲೇ ಕರ್ತೃತ್ವ, ಭೋಕ್ತೃತ್ವ ಮತ್ತು ಜ್ಞಾತೃತ್ವಗಳು ನಮಗೆ ಗಂಟು ಬಿದ್ದು ಜನ್ಮಾಂತರಗಳನ್ನು ಹೊಂದಲು ಕಾರಣವಾಗಿವೆ. ಆದುದರಿಂದ ದೇಹದ ಬಗ್ಗೆ ಇರುವ ಅಭಿಮಾನವನ್ನು ತ್ಯಜಿಸಬೇಕು. ಅಂದರೆ ದೇಹದ ಬಗ್ಗೆ ಇರುವ ವಿಶೇಷ ಮೋಹವನ್ನು ಬಿಡಬೇಕು. ಇದರಿಂದ ಹೆಂಡತಿ, ಮಕ್ಕಳು ಮತ್ತು ಹತ್ತಿರದ ಸಂಬಂಧಿಕರ ಬಗ್ಗೆ ಇರುವ ವ್ಯಾಮೋಹವನ್ನು ಹಾಗೂ ಮನೆ-ಮಠ ಮುಂತಾದ 'ನನ್ನದು' ಎನ್ನಬಹುದಾದ ಎಲ್ಲದರ ಮೇಲೆ ಇರುವ ಅಭಿಮಾನವನ್ನೂ ಬಿಡಬೇಕು ಎನ್ನುವುದು ಕೂಡ ಸ್ಪಷ್ಟವಾಗಿದೆ.

**ಓ.ಸಂ.90 :** ಈ ಎರಡನೆಯ ಸಾಧನವಾದ ವೈರಾಗ್ಯವು ಅತ್ಯಂತ ಮಹತ್ವವಾಗಿಯೂ ಹಾಗೂ ಶ್ರವಣಕ್ಕೆ ಯೋಗ್ಯತೆಯನ್ನು ತರುವಂತೆಯೂ ಇದ್ದು ಇದು ಭಾಗ್ಯವಂತನಿಗೇ ಮಾತ್ರ ಪ್ರಾಪ್ತವಾಗುತ್ತದೆ.

**ವಿವರಣೆ :** ನಾಲ್ಕು ಸಾಧನಗಳಲ್ಲಿ ಎರಡನೆಯದಾದ ವೈರಾಗ್ಯವನ್ನು ಅತ್ಯಂತ ಮಹತ್ವದ್ದೆಂದೂ ಮತ್ತು ಅದು ಭಾಗ್ಯವಂತರಿಗೆ ಮಾತ್ರ ಪ್ರಾಪ್ತವಾಗುವುದೆಂದೂ ಈ ಓವೀಯಲ್ಲಿ ತಿಳಿಸಲಾಗಿದೆ.

ತನ್ನ ಹೆಂಡತಿ, ಮಕ್ಕಳು, ಆಸ್ತಿ ಹಾಗೂ ಬಂಧು-ಬಾಂಧವರನ್ನೆಲ್ಲ ಬಿಟ್ಟಾಗಲೇ ( ಲೌಕಿಕ ದೃಷ್ಟಿಯಿಂದ ಇರುವ ಭಾಗ್ಯವನ್ನೆಲ್ಲ ಬಿಟ್ಟಾಗಲೇ ) ಸಾಧಕನಿಗೆ ವೈರಾಗ್ಯವು ಲಭಿಸುತ್ತದೆ. ಅಂದಮೇಲೆ ಭಾಗ್ಯವಂತರಿಗೆ ಮಾತ್ರ ಲಭಿಸುವುದೆಂದು ಇಲ್ಲಿ ತಿಳಿಸಿರುವುದನ್ನು ನೋಡಿದರೆ ಅನಿತ್ಯವಾಗಿರುವ ಲೌಕಿಕ ಹಾಗೂ ಪಾರಲೌಕಿಕ ಭಾಗ್ಯಗಳಾದ ಧರ್ಮ-ಅರ್ಥ-ಕಾಮಗಳನ್ನು ತೆಗೆದುಕೊಳ್ಳದೇ ನಿತ್ಯವಾಗಿರುವ ಹಾಗೂ ಪರಮ ಪುರುಷಾರ್ಥವಾಗಿರುವ ಮೋಕ್ಷ ಪ್ರಾಪ್ತಿಯನ್ನೇ ಇಲ್ಲಿ ಪರಮಭಾಗ್ಯವೆಂದು ಅರ್ಥೈಸಬೇಕಾಗಿದೆ. ಅಂದರೆ ನಾಲ್ಕನೆಯ ಸಾಧನವಾದ 'ಮೋಕ್ಷ'ವನ್ನು ಅಪೇಕ್ಷಿಸುವ ಮುಮುಕ್ಷುಗಳಿಗೆ ಮಾತ್ರ ವೈರಾಗ್ಯವು ಲಭಿಸುವುದು. ಒಬ್ಬ ಸಾಧಕನಿಗೆ ವೈರಾಗ್ಯವು ಅಳವಡದ ಹೊರತು ಅವನಿಗೆ ನಿಜವಾದ ವಿವೇಕವು ಜಾಗ್ರತವಾಗಿಲ್ಲವೆಂದೇ ಅರ್ಥವಾಗುವುದರಿಂದ ಇಲ್ಲಿ ವೈರಾಗ್ಯವನ್ನೇ ಅತ್ಯಂತ ಮಹತ್ವದ್ದೆಂದು ಹೇಳಲಾಗಿದೆ. ಇಂತಹ ವೈರಾಗ್ಯವಂತನಿಗೆ ಮಾತ್ರ ಗುರು ಮುಖೇನ ಶ್ರವಣ ಮಾಡುವ ಯೋಗ್ಯತೆ ಪ್ರಾಪ್ತವಾಗುತ್ತದೆ.

**ಓ.ಸಂ.91 :** ಹೀಗೆ ವೈರಾಗ್ಯವು ಪ್ರಾಪ್ತವಾದಾಗ ಸಾಮಾನ್ಯವಾಗಿ ಮನಸ್ಸು ವಿಷಯ ಭೋಗದ ಕಡೆಗೆ ಆಕರ್ಷಿತವಾಗುವುದಿಲ್ಲ. ಒಂದು ವೇಳೆ ಹಾಗೆ ಆಕರ್ಷಿತವಾದಾಗ ಮನಸ್ಸನ್ನು ಹಾಗೆ ಹೋಗದಂತೆ ವಿವೇಕಿಯು ತಡೆಯುವುದೇ 'ಶಮ'ವಾಗುತ್ತದೆ.

**ವಿವರಣೆ :** ಈ ಓವೀಯಿಂದ ಸಾಧನ ಚತುಷ್ಟಯದಲ್ಲಿ ಮೂರನೆಯದಾದ ಷಟ್ ಸಂಪತ್ತುಗಳನ್ನು ಒಂದೊಂದಾಗಿ ತೆಗೆದುಕೊಂಡು ಅವುಗಳಿಗೆ ದೀರ್ಘವಾದ ವಿವರಣೆಯನ್ನು ಕೊಡಲಾಗುವುದು. ಈ ಓವೀಯಲ್ಲಿ ಷಟ್ ಸಂಪತ್ತುಗಳಲ್ಲಿ ಮೊದಲನೆಯದಾದ 'ಶಮ' ದ ವಿವರಣೆಯನ್ನು ಪ್ರಾರಂಭಿಸಲಾಗಿದೆ. 'ಶಮ' ವೆಂದರೆ ಮನಸ್ಸಿನ ನಿಯಂತ್ರಣವಾಗಿರುತ್ತದೆ. ವೈರಾಗ್ಯಶಾಲಿಗೆ ಸಾಮಾನ್ಯವಾಗಿ ತನ್ನ ಮನಸ್ಸು ವಿಷಯ ಭೋಗದ ಕಡೆಗೆ ಓಡುವುದಿಲ್ಲ. ಒಂದು ವೇಳೆ ಹಾಗೆ ತನ್ನ ಮನಸ್ಸು ಚಂಚಲವಾದಾಗ ವಿವೇಕಿಯು ತನ್ನ ಮನಸ್ಸನ್ನು ಭೋಗದ ಕಡೆ ಹೊರಳದಂತೆ ನಿಯಂತ್ರಿಸುವುದೇ 'ಶಮ' ವಾಗಿರುತ್ತದೆ. ಈ ಓವೀಯಲ್ಲಿ 'ಶಮ' ದ ವ್ಯಾಖ್ಯೆಯನ್ನು ಕೊಡಲಾಗಿದೆ. ಇದರ ಬಗ್ಗೆ ದೀರ್ಘವಾದ ವಿವರಣೆಯನ್ನು ಮುಂದಿನ ಓವೀಯಿಂದ ಕೊಡಲಾಗಿದೆ.

**ಓ.ಸಂ.92 :** ಮನಸ್ಸು ಭೋಗಕ್ಕಾಗಿ ದುಃಖಕಾರಕ ವಿಷಯಗಳ ಕಡೆಗೆ ಧಾವಿಸುವುದರಿಂದ ಅನೇಕ ಜನ್ಮಗಳನ್ನು ಪಡೆಯುವಂತಾಗುತ್ತದೆ ಎಂದು ವಿವೇಕಿಯಾದವನು ವಿಷಯ ಭೋಗಗಳಿಂದ ಚಂಚಲವಾದ ತನ್ನ ಮನಸ್ಸಿಗೆ ಬೋಧಿಸಿ ಅದನ್ನು ನಿಯಂತ್ರಣಕ್ಕೆ ತರುತ್ತಾನೆ.

**ವಿವರಣೆ :** ವಿವೇಕೀ ಪುರುಷನು ವಿಷಯಗಳ ಕಡೆಗೆ ಧಾವಿಸುವ ತನ್ನ ಮನಸ್ಸನ್ನು ಹತೋಟಿಯಲ್ಲಿಡಲು ತನ್ನ ಮನಸ್ಸಿಗೆ ಈ ಮುಂದೆ ತಿಳಿಸಿದಂತೆ ದೀರ್ಘವಾಗಿ ಬೋಧಿಸುತ್ತಾನೆ: 'ಈ ಮನಸ್ಸು ವಿಷಯ ಭೋಗಗಳಿಂದ ಕ್ಷಣಿಕ ಸುಖವನ್ನು ಪಡೆದರೂ ಕೆಲ ಕಾಲದ ನಂತರ ಅದೇ ಭೋಗವು ದುಃಖವನ್ನು ತಂದುಕೊಡುತ್ತದೆ; ಆದುದರಿಂದ ಕ್ಷಣಿಕ ಆಮಿಷಕ್ಕೆ ಅದು ಒಳಗಾಗಬಾರದು; ಅಲ್ಲದೇ ಈ ರೀತಿಯ ಪಾಪಯುಕ್ತ ಸುಖ ಭೋಗವು ಅನೇಕ ಕೀಳು ಯೋನಿಗಳಲ್ಲಿ ಹುಟ್ಟುವಂತೆ ಮಾಡಿ ಈಗ ಸಿಕ್ಕಿರುವ ದುರ್ಲಭವೆನಿಸಿರುವ ಮಾನವ ಜನ್ಮವು ಪುನಃ ಸಿಗದಂತೆ ಮಾಡಬಹುದು; ಆದುದರಿಂದ ಉದಯಿಸಿರುವ ವೈರಾಗ್ಯ ಭಾವವು ಹಾಳಾಗದಂತೆ ತನ್ನನ್ನು ತಾನು ನಿಯಂತ್ರಣದಲ್ಲಿಟ್ಟುಕೊಳ್ಳಬೇಕು.'

**ಓ.ಸಂ.93 :** ಮನಸ್ಸು ದ್ರವ್ಯವನ್ನು ಇಚ್ಛಿಸುತ್ತದೆ. ಅದನ್ನು ಪಡೆಯಲು ನಾನಾ ಉಪಾಯಗಳ ಬಗ್ಗೆ ಚಿಂತಿಸುವುದರಿಂದ ಊಟವೇ ಅವನಿಗೆ ರುಚಿಸುವುದಿಲ್ಲ.

**ವಿವರಣೆ :** ಸಾಧಕನ ಬುದ್ಧಿಯು ತನ್ನ ಮನಸ್ಸನ್ನು ನಿಯಂತ್ರಣ ಮಾಡಲು ಅದಕ್ಕೆ ಹಿತವಚನವನ್ನು ಮುಂದುವರಿಸುತ್ತದೆ. ವಿಷಯ-ಸುಖವನ್ನು ಪಡೆಯಲು ಹಣ ಗಳಿಸುವುದು ಒಂದು ಮುಖ್ಯ ಸಾಧನವಾಗಿರುತ್ತದೆ. ಆದುದರಿಂದ ಮನಸ್ಸು ಅದನ್ನು ಇಚ್ಛಿಸುತ್ತದೆ ಮತ್ತು ಅದನ್ನು ಪಡೆಯಲು ಇರುವ ಅನೇಕ ಮಾರ್ಗೋಪಾಯಗಳನ್ನು ಕುರಿತು ಚಿಂತಿಸುತ್ತದೆ. ಇವುಗಳಲ್ಲಿ ಕೆಲವು ನ್ಯಾಯಯುತವಾಗಿದ್ದರೂ ಹಣಗಳಿಸಲು ಕಷ್ಟಸಾಧ್ಯವಾಗಿರುತ್ತದೆ. ಆದರೆ ಕೆಲವೊಂದು ವಿಧಾನಗಳು ಸುಲಭವಾಗಿದ್ದರೂ ಅವು ನ್ಯಾಯಯುತವಾಗಿರದೇ ಬೇರೆಯವರೆಗೆ ವಂಚನೆ ಮಾಡುವುದರಿಂದ ಹಣ ಗಳಿಸುವುದಾಗಿರುತ್ತದೆ. ಹಗಲು ರಾತ್ರಿ ಈ ಚಿಂತನೆಯಲ್ಲಿಯೇ ಹಬ್ಬದ ಅಡುಗೆ ಮಾಡಿದ್ದರೂ ಆವನಿಗೆ ಅದು ರುಚಿಸುವುದೇ ಇಲ್ಲ.

**ಓ.ಸಂ.94 :** ಹೀಗೆ ದ್ರವ್ಯವನ್ನು ಗಳಿಸುವ ಚಿಂತೆಯಲ್ಲಿಯೇ ಅವನಿಗೆ ಒಂದು ಕ್ಷಣ ಕೂಡ ನಿದ್ರೆ ಹತ್ತುವುದಿಲ್ಲ. ಅಲ್ಲದೇ ಸುಖವು ಆಗಾಗ ಬರುತ್ತಿದ್ದರೂ ಅದೆಲ್ಲವೂ ದುಃಖ ರೂಪವಾಗಿಯೇ

**ಓ.ಸಂ.96 :** ದ್ರವ್ಯದ ಚಿಂತೆಯಲ್ಲಿ ಅವನಿಗೆ ರಾತ್ರಿ-ಹಗಲುಗಳ ವ್ಯತ್ಯಾಸವೇ ತಿಳಿಯುವುದಿಲ್ಲ. ಹೋಗಬಾರದ ಜನರಲ್ಲಿ ಹೋಗಿ ಯಾರ ಸೇವೆಯನ್ನು ಮಾಡಬಾರದೋ ಅವರಲ್ಲಿ ಪ್ರಾಮಾಣಿಕವಾದ ಸೇವೆಯನ್ನು ಮಾಡುತ್ತಾನೆ.

**ವಿವರಣೆ :** ದ್ರವ್ಯದ ಚಿಂತೆಯಲ್ಲಿ ಮುಳುಗಿದ ಮನಸ್ಸನ್ನು ನಿಯಂತ್ರಣದಲ್ಲಿಡಲು ವಿವೇಕಿಯು ಮನಸ್ಸಿಗೆ ಮಾಡುವ ಬೋಧವು ಮುಂದುವರಿಯುತ್ತದೆ. ದ್ರವ್ಯದ ಚಿಂತೆಯಲ್ಲಿ ದಿನವೂ ನಿದ್ರೆ ಬರದೇ ಅವನು ಒದ್ದಾಡುತ್ತಾನೆ. ಅವನಿಗೆ ರಾತ್ರಿ ಹಗಲು ಒಂದಾಗುತ್ತದೆ. ಸಿಕ್ಕ ಸಿಕ್ಕಲ್ಲಿ ಅಲೆದಾಡುತ್ತಾನೆ. ಹೋಗಬಾರದ ಕಡೆಯಲ್ಲಿ ಹೋಗಿ ಕೆಲಸ ಹುಡುಕಲು ಪ್ರಯತ್ನಿಸುತ್ತಾನೆ. ಯಾರ ಕೈ ಕೆಳಗೆ ಕೆಲಸ ಮಾಡಬಾರದೋ ಅವರಲ್ಲಿ ಹೋಗಿ ಅವರ ಸೇವೆಯನ್ನು ಪ್ರಾಮಾಣಿಕವಾಗಿ ಮಾಡುತ್ತಾನೆ. ಇದರಿಂದ ಸಮಾಜಘಾತುಕ ಕೆಲಸಗಳು ಅವನಿಂದ ನಡೆಯುತ್ತವೆ. ಅಧಾರ್ಮಿಕ ಹಾಗೂ ಕಾನೂನಿಗೆ ವ್ಯತಿರಿಕ್ತವಾದ ಕೆಲಸಗಳು ಅವನಿಂದ ನಡೆದು ಹೋಗುತ್ತವೆ. ಇದರಿಂದ ಪಾಪವು ಘಟಿಸಲ್ಪಡುವುದಲ್ಲದೇ ಸಮಾಜದಲ್ಲಿ ಅನೇಕ ಸಂಕಷ್ಟಗಳಿಗೆ ಒಳಗಾಗುತ್ತಾನೆ.

**ಓ.ಸಂ.97 :** ದ್ರವ್ಯಕ್ಕಾಗಿ ದುಷ್ಟರು ಮಾಡುವ ಕೆಲಸಗಳನ್ನು ಅವನು ಮಾಡುತ್ತಾನೆ. ಹೀಗೆ ಕೆಲಸದಲ್ಲಿ ಮಗ್ನನಾದವನಿಗೆ ವರುಷಗಳು ಉರುಳಿದರೂ ಗಣನೆಗೆ ಬರುವುದಿಲ್ಲ. ಹೀಗೆ ಅತ್ಯಂತ ಪ್ರಯಾಸದಿಂದ ದುಡಿಯುತ್ತಾನೆ.

**ವಿವರಣೆ :** ದ್ರವ್ಯಕ್ಕಾಗಿ ಕೀಳು ಜನರ ಸೇವೆ ಮಾಡುವಾಗ ದುಷ್ಟ ಜನರ ಸಹವಾಸವೂ ಹಾಗೂ ದುಷ್ಟ ಕಾರ್ಯಗಳನ್ನು ಮಾಡುವುದೂ ಅವನಿಗೆ ಅನಿವಾರ್ಯವಾಗುತ್ತದೆ. ಒಮ್ಮೊಮ್ಮೆ ಹೆಂಡತಿ-ಮಕ್ಕಳನ್ನು ಬಿಟ್ಟು ಬೇರೆ ಊರಲ್ಲಿ ಕೆಲಸ ಮಾಡಬೇಕಾಗುತ್ತದೆ. ಹೀಗೆ ಕೆಲಸ ಮಾಡುವಾಗ ಅವನಿಗೆ ವರುಷಗಳು ಉರುಳಿ ಹೋಗುವುದು ಗಣನೆಗೇ ಬರುವುದಿಲ್ಲ. ತನ್ನ ಸುಖ ಸಂತೋಷಗಳನ್ನು ದ್ರವ್ಯಕ್ಕಾಗಿ ಮರೆತು ಬಿಡುತ್ತಾನೆ. ಹೀಗೆ ಅತ್ಯಂತ ಪ್ರಯಾಸದಾಯಕವಾದ ಕೆಲಸವನ್ನು ಮಾಡುತ್ತಾನೆ. ಈ ಓವೀಯ ಕೊನೆಯ ಚರಣವನ್ನು ಮುಂದಿನ ಓವೀಯಲ್ಲಿ ತೆಗೆದುಕೊಂಡು ವಿವರಿಸಲಾಗಿದೆ.

**ಓ.ಸಂ.98 :** ಇಷ್ಟೆಲ್ಲಾ ಕಷ್ಟಪಟ್ಟರೂ ಅವನ ಪ್ರಾರಬ್ಧದಲ್ಲಿ, ಅದೂ ಈ ಜನ್ಮದಲ್ಲಿಯೇ, ದ್ರವ್ಯವು ಸಿಗುವಂತಿದ್ದರೆ ಹಾಗೂ ಹೋದ ಜನ್ಮಗಳಲ್ಲಿ ಅವನು ದ್ರವ್ಯವನ್ನು ದಾನ ಮಾಡಿದ್ದರೆ ಮಾತ್ರ ಅವನಿಗೆ ದ್ರವ್ಯವು ಲಭಿಸೀತು. ಇಲ್ಲದಿದ್ದರೆ ಪಟ್ಟ ಶ್ರಮವೆಲ್ಲ ವ್ಯರ್ಥವಾಗುತ್ತದೆ.

**ವಿವರಣೆ :** ಹಿಂದಿನ ಓವೀಯ ಕೊನೆಯ ಚರಣವನ್ನು ಈ ಓವೀಯಲ್ಲೇ ತೆಗೆದುಕೊಂಡು ವಿವರಿಸಲಾಗಿದೆ. ಹೀಗೆ ಅನೇಕ ರೀತಿ ಧರ್ಮಾಧರ್ಮ ಮಾರ್ಗಗಳನ್ನು ಹಿಡಿದು ಕಷ್ಟಪಟ್ಟು ದ್ರವ್ಯಕ್ಕಾಗಿ ದುಡಿದರೂ ಅದು ಸಿಕ್ಕೇ ಬಿಡುತ್ತದೆ ಎಂಬ ಭರವಸೆ ಇರುವುದಿಲ್ಲ. ಅದು ಪ್ರಾಪ್ತವಾಗಲು ಹೋದ ಜನ್ಮಗಳಲ್ಲಿ ದ್ರವ್ಯವನ್ನು ಅವನು ಇತರರಿಗೆ ದಾನ ಮಾಡಿರಬೇಕು. ಹಾಗೂ ಅವನ ಇದೇ ಜನ್ಮದ ಪ್ರಾರಬ್ಧದಲ್ಲಿಯೇ ಅದು ಪ್ರಾಪ್ತವಾಗುವಂತಿರಬೇಕು. ಹೀಗಿದ್ದರೆ ಮಾತ್ರ ದ್ರವ್ಯವು ಅವನಿಗೆ ಪ್ರಾಪ್ತವಾಗುತ್ತದೆ. ಒಂದು ವೇಳೆ ಅವನಿಗೆ ದ್ರವ್ಯವು ಸಿಗದಿದ್ದರೆ ಅವನು ಕಷ್ಟ ಪಟ್ಟಿದ್ದು ವ್ಯರ್ಥವಾಗುವುದು. ಅನ್ಯಾಯ ಮಾರ್ಗವನ್ನು ಹಿಡಿದಿದ್ದರೆ ಅವನಿಗೆ ಜೈಲುವಾಸವೂ ಆಗಬಹುದು. ಅಲ್ಲದೇ ವ್ಯಾಪಾರವನ್ನು ಮಾಡುತ್ತಿದ್ದಲ್ಲಿ ಅವನಿಗೆ ನಷ್ಟವೂ ಉಂಟಾಗಬಹುದು.

**ಓ.ಸಂ.99 :** ಈ ರೀತಿ ಅವನು ದ್ರವ್ಯಾರ್ಜನೆಗೆ ಪಟ್ಟ ಅತೀವ ಕಷ್ಟವು ವ್ಯರ್ಥವಾಗಲು ಮೃತ್ಯುವಿಗಿಂತಲೂ ಹೆಚ್ಚು ಸಂಕಟವನ್ನು ಅನುಭವಿಸಬೇಕಾಗುತ್ತದೆ. ಒಂದು ವೇಳೆ ಅದು ಪ್ರಾರಬ್ಧವಶಾತ್ ಪ್ರಾಪ್ತವಾದರೂ ಆಗಬಹುದು.

**ವಿವರಣೆ :** ಅನೇಕ ವೇಳೆ ದ್ರವ್ಯವನ್ನು ಸಂಪಾದಿಸಲು ಮಾಡುವ ಅನೇಕ ಪ್ರಯತ್ನಗಳು ವ್ಯರ್ಥವಾಗುವುದು ನಮ್ಮ ಅನುಭವದಲ್ಲಿಯೇ ಇರುತ್ತದೆ. ರೈತರು ಇಡೀ ವರ್ಷ ಗದ್ದೆಯನ್ನು ಉತ್ತಿ, ಬಿತ್ತಿ, ಮುಂತಾದ ಕೆಲಸಗಳನ್ನು ಮಾಡಿ ಕೈಯಿಂದ ಗೊಬ್ಬರಾದಿಗಳಿಗೆ ದ್ರವ್ಯವನ್ನು ವೆಚ್ಚ ಮಾಡುತ್ತಾರೆ. ಗದ್ದೆಯಲ್ಲಿ ಒಳ್ಳೆಯ ಬೆಳೆ ಬಂದು ಕೊಯ್ಯುವ ವೇಳೆಗೆ ಮಳೆಯು ರಭಸದಿಂದ ಬಂದು ಬೆಳೆಯು ಕೆಟ್ಟು ಹೋಗುವುದು ಸಾಮಾನ್ಯವಾಗಿರುತ್ತದೆ. ಹಾಗೆಯೇ ವ್ಯಾಪಾರದಲ್ಲಿಯೂ ನಷ್ಟವಾಗಬಹುದು. ಅಂತಹ ಸಂದರ್ಭದಲ್ಲಿ ಮೃತ್ಯುವಿಗಿಂತಲೂ ಹೆಚ್ಚು ಸಂಕಟವನ್ನು ಅನುಭವಿಸುತ್ತಾರೆ. ಕೆಲವರು ಆತ್ಮ ಹತ್ಯೆಯನ್ನೇ ಮಾಡಿಕೊಳ್ಳುತ್ತಾರೆ. ಕೆಲವೊಂದು ಸಂದರ್ಭಗಳಲ್ಲಿ ಪ್ರಾರಬ್ಧವು ಸಹಕಾರಿಯಾಗಿದ್ದಾಗ ಕೆಲವರಿಗೆ ಪಟ್ಟ ಶ್ರಮಕ್ಕೆ ತಕ್ಕ

ಪ್ರತಿಫಲವೂ ಬರಬಹುದು. ಇದರ ಬಗ್ಗೆಯೇ ಮುಂದಿನ ಓವೀಯು ವಿವರಗಳನ್ನು ಕೊಟ್ಟು ಅದಕ್ಕಿರುವ ವಿಘ್ನಗಳನ್ನು ತಿಳಿಸುತ್ತದೆ.

**ಓ.ಸಂ.100 :** ಪ್ರಾರಬ್ಧವಶಾತ್ ದ್ರವ್ಯವು ಪ್ರಾಪ್ತವಾಗುವ ಸಂದರ್ಭ ಅವನಿಗೆ ಒದಗಿಬಂದರೂ ಅನೇಕರು ದ್ವೇಷದಿಂದ ಅದಕ್ಕೆ ವಿಘ್ನವನ್ನುಂಟು ಮಾಡುತ್ತಾರೆ.

**ವಿವರಣೆ :** ಒಂದೇ ವೃತ್ತಿಯಲ್ಲಿರುವವರಿಗೆ ಪರಸ್ಪರ ದ್ವೇಷ ಹಾಗೂ ಅಸೂಯೆಯು ಸಾಮಾನ್ಯವಾಗಿರುತ್ತದೆ. ಒಬ್ಬನಿಗೆ ಲಾಭವು ಅಧಿಕವಾದಾಗ ಇನ್ನೊಬ್ಬನು ಅದಕ್ಕೆ ವಿಘ್ನವನ್ನುಂಟು ಮಾಡುವುದು ಸ್ವಾಭಾವಿಕವಾಗಿರುತ್ತದೆ. ಒಂದೇ ಊರಲ್ಲಿ ಒಬ್ಬ ರೈತನ ಗದ್ದೆಯಲ್ಲಿ ಬೆಳೆಯು ಚೆನ್ನಾಗಿದ್ದಲ್ಲಿ ಬೆಳೆ ಹಾಳಾಗಿರುವ ರೈತರಿಗೆ ಅದನ್ನು ನೋಡಿ ಅಸೂಯೆಯು ಉಂಟಾಗುತ್ತದೆ. ಅನೇಕ ವೇಳೆ ಬೆಳೆ ಕೊಯ್ಯುವ ಸಂದರ್ಭದಲ್ಲಿ ಗದ್ದೆಗೇ ಬೆಂಕಿ ಹಚ್ಚುವ ಪ್ರಸಂಗವೂ ಕೂಡ ಇಲ್ಲದಿಲ್ಲ. ಹಾಗೆಯೇ ವ್ಯಾಪಾರ ಮುಂತಾದ ಉಳಿದ ವೃತ್ತಿಗಳಲ್ಲೂ ಇಂತಹ ಪ್ರಸಂಗಗಳಿದ್ದು ದ್ವೇಷ-ಅಸೂಯೆಗಳಿಂದ ಇತರರ ಏಳಿಗೆಗಳನ್ನು ನೋಡಲಾರದೇ ವಿಘ್ನವನ್ನು ಉಂಟುಮಾಡುತ್ತಾರೆ. ಈ ವಿಘ್ನಗಳನ್ನು ನಿವಾರಿಸುವುದೂ ಕೂಡ ದುಃಖಕಾರಕವೇ ಆಗಿರುತ್ತದೆ.

**ಓ.ಸಂ.101 :** ಹೀಗೆ ದ್ವೇಷ ಮಾಡುವ ಜನರ ಬಗ್ಗೆ ಸದಾ ಎಚ್ಚರ ವಹಿಸಿ ಅವರು ಅವನಿಗೆ ವಿಘ್ನ ಮಾಡದಂತೆ ನೋಡಿಕೊಳ್ಳಬೇಕು.

**ವಿವರಣೆ :** ಆಯಾ ವೃತ್ತಿಗೆ ಸಂಬಂಧ ಪಟ್ಟಂತೆ ದ್ವೇಷ ಮಾಡುವ ಜನರು ಮಾಡಬಹುದಾದ ಹಾನಿಯ ಬಗ್ಗೆ ಪೂರ್ತಿಯಾದ ಮಾಹಿತಿಯು ಗೊತ್ತಿದ್ದಲ್ಲಿ ಅವರು ಉಂಟುಮಾಡುವ ಅನೇಕ ವಿಘ್ನಗಳ ಬಗೆಗೂ ಎಚ್ಚರ ವಹಿಸಿ ಅವರು ಯಾವುದೇ ವಿಘ್ನವನ್ನು ಉಂಟುಮಾಡದಂತೆ ಕ್ರಮವನ್ನು ಕೈಕೊಳ್ಳಬಹುದು. ಉದಾಹರಣೆಗೆ, ಗದ್ದೆಯಲ್ಲಿ ಬೆಳೆ ಬಂದಾಗ ಕೊಯ್ಲಿನ ಸಂದರ್ಭದಲ್ಲಿ ಅದಕ್ಕೆ ಯಾವುದೇ ರೀತಿಯಲ್ಲಿ ಹಾನಿ ಉಂಟಾಗದಂತೆ ಕಾಯ್ದು ಅದನ್ನು ರಕ್ಷಿಸಿಕೊಳ್ಳಬಹುದು. ಈಗಿನ ಕಾಲದಲ್ಲಿ ಎಲ್ಲದಕ್ಕೂ ವಿಮೆ ಮಾಡಿಸುವ ಸೌಲಭ್ಯವು ಇರುತ್ತದೆ. ಇದರಿಂದ ಬಹಳಷ್ಟು ಆಗಬಹುದಾದ ಹಾನಿಯನ್ನು ತುಂಬಿಕೊಳ್ಳಬಹುದು. ವೇದಾಂತ

ವಿಷಯದಲ್ಲಿ ಮುಖ್ಯವಾದ ವಿಷಯವೆಂದರೆ ದ್ರವ್ಯಕ್ಕಾಗಿ ಹೇಗೆ ಅನೇಕ ಕಷ್ಟ ನಷ್ಟಗಳನ್ನು ಹಾಗೂ ಅತೀವ ದುಃಖವನ್ನು ಅನುಭವಿಸಬೇಕಾಗುತ್ತದೆ ಎನ್ನುವುದನ್ನು ತಿಳಿದುಕೊಳ್ಳಬೇಕು.

**ಓ.ಸಂ.102 :** ದ್ರವ್ಯವಿದ್ದಲ್ಲಿ ಕಳ್ಳಕಾಕರ ಭಯವು ಇರುತ್ತದೆ. ದ್ರವ್ಯ ಕಾರಣಕ್ಕಾಗಿ ಅನೇಕವೇಳೆ ಪ್ರಾಣವನ್ನು ಕಳೆದುಕೊಳ್ಳಬೇಕಾಗುತ್ತದೆ. ಹಾಗೆಯೇ ದ್ರವ್ಯಕ್ಕಾಗಿ ಮಗನು ತಂದೆಯೊಡನೆ ವಿರೋಧವನ್ನು ಕಟ್ಟಿಕೊಂಡು ಶತ್ರುವಾಗಬೇಕಾಗುತ್ತದೆ.

**ವಿವರಣೆ :** ಕಷ್ಟಪಟ್ಟು ದುಡಿದು ಗಳಿಸಿದ ದ್ರವ್ಯವನ್ನು ರಕ್ಷಣೆ ಮಾಡುವುದು ಕೂಡ ಅತ್ಯಂತ ಕಷ್ಟದ ಕೆಲಸವಾಗಿರುತ್ತದೆ. ಶ್ರೀಮಂತ ಮನೆಗಳನ್ನು ಕಳ್ಳಕಾಕರು ಲೂಟಿ ಮಾಡುವುದು ಸ್ವಾಭಾವಿಕವಾಗಿರುತ್ತದೆ. ಎಷ್ಟೇ ಎಚ್ಚರಿಕೆಯ ಕ್ರಮಗಳನ್ನು ಅನುಸರಿಸಿದರೂ ಕೂಡ ಅವುಗಳನ್ನು ಮೀರಿ ಕಳ್ಳರು ಲೂಟಿ ಮಾಡುವುದು ತಪ್ಪುವುದಿಲ್ಲ. ಹೀಗೆ ಮಾಡುವುದನ್ನು ಪ್ರತ್ಯೇಕವಾಗಿ ನೋಡಿ ಅದನ್ನು ತಡೆಗಟ್ಟಲು ಪ್ರಯತ್ನಿಸಿದವರ ಪ್ರಾಣ ಹಾನಿಯೂ ಕೂಡ ಆಗಿರುವ ಅನೇಕ ಸಂಗತಿಗಳಿವೆ. ಕುಟುಂಬದ ಸದಸ್ಯರಲ್ಲೇ ಒಡಕು ಉಂಟಾಗುತ್ತದೆ. ತಂದೆ ಮಕ್ಕಳಲ್ಲಿ ಪರಸ್ಪರ ಕಲಹ ಉಂಟಾಗಿ ಒಬ್ಬರಿಗೊಬ್ಬರು ಶತ್ರುಗಳು ಆಗುತ್ತಾರೆ. ಇಂತಹ ಎಷ್ಟೋ ಸಂಗತಿಗಳು ಕೋರ್ಟಿನ ಮೆಟ್ಟಲೇರಿವೆ.

**ಓ.ಸಂ.103 :** ದ್ರವ್ಯಕ್ಕಾಗಿ ಪರಸ್ಪರ ಕಲಹವು ಉಂಟಾಗುತ್ತದೆ. ಅದಕ್ಕಾಗಿ ವಿಶ್ವಾಸಘಾತವನ್ನು ಮಾಡುತ್ತಾರೆ. ದ್ರವ್ಯವು ಖರ್ಚಾಗಿ ಹೋದಾಗ ಅದರ ಚಿಂತೆಯು ಅವನ ಮನಸ್ಸಿಗೆ ಅತೀವ ದುಃಖವನ್ನುಂಟುಮಾಡುತ್ತದೆ.

**ವಿವರಣೆ :** ದ್ರವ್ಯಕ್ಕಾಗಿಯೇ ಅಂದರೆ ಆಸ್ತಿ, ಮನೆ, ಮುಂತಾದವುಗಳಿಗಾಗಿಯೇ ಜನರು ಕಚ್ಚಾಡುವುದನ್ನು ಕಾಣುತ್ತೇವೆ. ಇದಕ್ಕಾಗಿ ಸಹೋದರರು ಪರಸ್ಪರ ಜಗಳವಾಡುತ್ತಾರೆ. ವ್ಯಾಪಾರವನ್ನು ಸ್ನೇಹಿತರಾಗಿ ಜೊತೆಯಲ್ಲಿ ಪ್ರಾರಂಭಿಸಿದವರು ಹಣಕ್ಕಾಗಿ ಪರಸ್ಪರ ವೈಮನಸ್ಸಿನಿಂದ ದೂರವಾಗುತ್ತಾರೆ. ಅದರಲ್ಲಿ ವಿಶ್ವಾಸಘಾತವನ್ನು ಮಾಡುವುದರಿಂದ ಒಬ್ಬರು ಇನ್ನೊಬ್ಬರಿಂದ ವಂಚಿತರಾಗುವವರು ಹೆಚ್ಚಿನ ಸಂಖ್ಯೆಯಲ್ಲಿರುತ್ತಾರೆ. ಇದೆಲ್ಲ ದ್ರವ್ಯಕ್ಕಾಗಿಯೇ ನಡೆಯುತ್ತಿರುತ್ತದೆ. ದ್ರವ್ಯವನ್ನು ಅರ್ಜನೆ ಮಾಡಿದಾಗಲೂ ಅದು ಬಹಳ ದಿನಗಳ ಪರ್ಯಂತ ಉಳಿಯದೇ ಖರ್ಚಾಗಿ ಹೋಗುತ್ತದೆ. ಆಗಲೂ ಕೂಡ ಅದರ ಚಿಂತೆಯಲ್ಲಿ

ಮನಸ್ಸಿಗೆ ಅತೀವ ದುಃಖ ಉಂಟಾಗುತ್ತದೆ. ಹೀಗೆ ದ್ರವ್ಯವು ವಿವಿಧ ರೀತಿಯಲ್ಲಿ ವ್ಯಕ್ತಿಗೆ ದುಃಖಕಾರಕವಾಗಿರುತ್ತದೆ.

**ಓ.ಸಂ.104 :** ದ್ರವ್ಯದ ಅತಿಲಾಭದ ಆಸೆಯಿಂದ ಮತ್ತು ಅದರ ರಕ್ಷಣೆಯ ಉದ್ದೇಶದಿಂದ ಪಂಚ ಮಹಾಪಾತಕಗಳು ನಡೆದು ಹೋಗುತ್ತವೆ. ಇದೇ ರೀತಿ ದ್ರವ್ಯವು ಇರುವಾಗ ಅವನು ಅನೇಕ ದುಃಖಗಳನ್ನು ಎದುರಿಸಬೇಕಾಗುತ್ತದೆ.

**ವಿವರಣೆ :** ಆದಾಯ ತೆರಿಗೆ ಕೊಡದಿರುವುದು ಹಾಗೂ ಬೇರೆಯವರ ಆಸ್ತಿಯನ್ನು ಲಪಟಾಯಿಸುವುದು ಮುಂತಾದುವುಗಳಿಂದ ಕೋಟಿಗಟ್ಟಲೇ ದ್ರವ್ಯವನ್ನು ಕೂಡಿಹಾಕಿದವರು ಇದ್ದಾರೆ. ಹಾಗೆ ವಂಚನೆಯಿಂದ ಬಂದ ದ್ರವ್ಯವನ್ನು ರಕ್ಷಣೆ ಮಾಡಿಕೊಳ್ಳುವುದೂ ಕೂಡ ಅತ್ಯಂತ ದುಃಖದಾಯಕವೇ ಆಗಿರುತ್ತದೆ. ಇದಕ್ಕಾಗಿ ಪಂಚ ಮಹಾಪಾತಕಗಳನ್ನು ಮಾಡಲೂ ಇವರು ಹೇಸುವುದಿಲ್ಲ. ಈ ಪಂಚ ಮಹಾಪಾತಕಗಳು ಯಾವುವೆಂದರೆ : 1) ಬ್ರಾಹ್ಮಣರ ( ಸಾತ್ವಿಕರ ) ಹತ್ಯೆ; 2) ಸುರಾಪಾನ; 3) ಚಿನ್ನ ಮುಂತಾದ ಅತಿ ಬೆಲೆಯುಳ್ಳ ವಸ್ತುಗಳನ್ನು ಕದಿಯುವುದು; 4) ತನ್ನ ಗುರು ಪತ್ನಿಯೊಡನೆ ಮಲಗುವುದು; ಕೊನೆಯದಾಗಿ 5) ಈ ನಾಲ್ಕು ಪಾತಕಗಳನ್ನು ಮಾಡಿದವರ ಸಹವಾಸ ಅಂದರೆ ಅಂತಹವರೊಡನೆ ಸ್ನೇಹ ಮಾಡುವುದು. ಈ ರೀತಿ ಹಣವಿದ್ದಾಗ ಐಶ್ವರ್ಯಮದದಿಂದ ಮಾಡಬಾರದ ಈ ಪಂಚ ಮಹಾಪಾತಕಗಳನ್ನು ಮಾಡಿ ಕೊನೆಗೆ ಇಹ ಹಾಗೂ ಪರದಲ್ಲಿ ದುಃಖವನ್ನು ಅನುಭವಿಸುತ್ತಾರೆ.

**ಓ.ಸಂ.105 :** ಕೊನೆಗೆ ಅವರು ಹೇಗೋ ರಕ್ಷಿಸಿದ ದ್ರವ್ಯವು ಖರ್ಚಾಗುತ್ತದೆ. ಅದನ್ನು ಕಳ್ಳಕಾಕರು ದೋಚಬಹುದು. ಇಲ್ಲವೇ ಬೇರೆ ರೀತಿಯಿಂದ ಅದು ನಾಶವಾಗುತ್ತದೆ.

**ವಿವರಣೆ :** ಹಿಂದಿನ ಓವೀಯಲ್ಲಿ ದ್ರವ್ಯದ ಸಂಚಯ ಹಾಗೂ ರಕ್ಷಣೆಗೆ ಜನರು ಮಹಾ ಪಾತಕಗಳನ್ನೂ ಕೂಡ ಮಾಡಲು ತಯಾರಾಗುತ್ತಾರೆ ಎಂಬುದನ್ನು ತಿಳಿಸಲಾಗಿದೆ. ಹಾಗೆ ರಕ್ಷಿಸಿದ ದ್ರವ್ಯವು ಅನೇಕ ರೀತಿಯಲ್ಲಿ ಖರ್ಚಾಗುತ್ತದೆ. ತಂದೆ ಮಾಡಿದ ಹಣವನ್ನು ಮಕ್ಕಳು ದುಂದುವೆಚ್ಚ ಮಾಡಿ ಖರ್ಚು ಮಾಡುತ್ತಾರೆ. ಇಲ್ಲವೇ ಕಳ್ಳಕಾಕರು ಇವರ ಸಂಪತ್ತನ್ನು ದೋಚಿಬಿಡಬಹುದು. ದ್ರವ್ಯವನ್ನು ಒಂದು ದಾರಿಯಿಂದ ಅರ್ಜನೆ ಮಾಡಬಹುದಾದರೆ ಅದನ್ನು

ರೇಸ್, ಮುಂತಾದ ಅನೇಕ ಜೂಜಾಟಗಳು, ಶೇರ್ ವ್ಯವಹಾರ, ರೋಗ ರುಜಿನಗಳಿಗಾಗಿ ಮಾಡಲೇ ಬೇಕಾದ ಖರ್ಚು - ಹೀಗೆ ಅನೇಕ ರೀತಿಯಲ್ಲಿ ಸಂಗ್ರಹಿಸಿದ ಹಣವು ಖರ್ಚಾಗುತ್ತದೆ. ಹಲವಾರು ರೀತಿಯಲ್ಲಿ ಖರ್ಚುಮಾಡಬಹುದು. ಸುರಾಪಾನ, ಇಸ್ಪೇಟ್ ಎಲೆಯಾಟ, ಕುದುರೆ

**ಓ.ಸಂ.106 :** ದ್ರವ್ಯವು ನಷ್ಟ ಹೊಂದಿದಾಗ ಅವನಿಗೆ ಬಹಳ ದುಃಖ ಉಂಟಾಗುತ್ತದೆ. ಇದರಿಂದ ಎಷ್ಟೋ ಜನರು ವಿಷ ತೆಗೆದುಕೊಳ್ಳುತ್ತಾರೆ. ಕೆಲವರಿಗೆ ಹುಚ್ಚು ಹಿಡಿಯುತ್ತದೆ. ಹೀಗೆ ದ್ರವ್ಯವು ತೀರಿದಾಗ ಅವನಿಗೆ ದುಃಖವು ಅನಿವಾರ್ಯವಾಗುತ್ತದೆ.

**ವಿವರಣೆ :** ಈ ಓವೀಯಲ್ಲಿ ದ್ರವ್ಯವು ನಷ್ಟಹೊಂದಿದಾಗ ಮನಸ್ಸಿನ ಮೇಲೆ ಆಗುವ ದುಷ್ಪರಿಣಾಮಗಳನ್ನು ಕೊಟ್ಟಿದ್ದಾರೆ. ಸಾಮಾನ್ಯವಾಗಿ ಅಲ್ಪ-ಸ್ವಲ್ಪ ನಷ್ಟವಾದಾಗ ಮನಸ್ಸಿಗೆ ಅತೀವ ದುಃಖವಾದರೂ ಅದನ್ನು ಕಾಲಾಂತರದಲ್ಲಿ ಸುಧಾರಿಸಿಕೊಂಡು ಆ ದುಃಖವನ್ನು ಮನುಷ್ಯ ಮರೆಯುತ್ತಾನೆ. ಆದರೆ ಸಂಪೂರ್ಣವಾಗಿ ದ್ರವ್ಯವು ನಷ್ಟವಾದಾಗ ವ್ಯಕ್ತಿಯು ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಬಹಳಷ್ಟು ಸಾಲವನ್ನು ಮಾಡಿದ ರೈತರು ತಮ್ಮ ಬೆಳೆಯು ಸಂಪೂರ್ಣ ನಾಶವಾದಾಗ ಇಲ್ಲವೇ ಬರಗಾಲವು ಬಂದಾಗ ಆತ್ಮಹತ್ಯೆಗೆ ಶರಣಾಗುತ್ತಾರೆ, ಇಲ್ಲವೇ ತಮ್ಮ ಮನಸ್ಸಿನ ಸ್ಥಿಮಿತವನ್ನು ಕಳೆದುಕೊಂಡು ಹುಚ್ಚರಾಗುತ್ತಾರೆ. ವ್ಯಾಪಾರದಲ್ಲಿ ಭಾರೀ ನಷ್ಟವಾದಾಗಲೂ ಈ ರೀತಿಯ ದುಃಖವು ಅನಿವಾರ್ಯವಾಗುತ್ತದೆ.

**ಓ.ಸಂ.107 :** ಧನಿಕನು ಸಾಯುವಾಗ ಒಂದು ವೇಳೆ ದ್ರವ್ಯವು ಉಳಿದರೂ ಅದನ್ನು ಬಿಟ್ಟು ಹೋಗುವಾಗ ಅವನಿಗೆ ಅನಿವಾರ್ಯವಾಗಿ ಬಹಳ ದುಃಖವಾಗುತ್ತದೆ.

**ವಿವರಣೆ :** ಧನಿಕನು ಸಾಯುವಾಗ ಅವನು ಗಳಿಸಿದ ಅಪಾರ ಹಣವನ್ನು ಬಿಟ್ಟು ಹೋಗಬೇಕಾಗುತ್ತದೆ. ಅವನಿಗೆ ಧನದ ವಾಸನೆಯು ಇರುವುದರಿಂದ ಅವನು ಸಾಯುವಾಗ ಅತೀವ ದುಃಖವನ್ನು ಅನುಭವಿಸುತ್ತಾನೆ. ಪ್ರತಿಯೊಬ್ಬನೂ ಸಾಯುವಾಗ ತಮ್ಮದೇ ಆದ ರೀತಿಯಲ್ಲಿ ಆಗುವ ದುಃಖವನ್ನು ಹೊರಹಾಕುತ್ತಾರೆ. ಕೆಲವರು ಅದನ್ನೇ ಕನವರಿಸುತ್ತಾ ಸಾಯುತ್ತಾರೆ. ಕೆಲವರು ಇರುವ ಹಣವನ್ನೆಲ್ಲ ತಮ್ಮ ಹಾಸಿಗೆಯ ಅಡಿಯಲ್ಲಿ ಇಟ್ಟುಕೊಂಡೇ ಸಾಯುತ್ತಾರೆ. ಕೆಲವರು ತಮಗೆ ಬರಬೇಕಾದ ಸಾಲಕೊಟ್ಟ ಹಣವು ಬರುವವರೆಗೆ ಸಾಯಲು ಇಚ್ಛಿಸುವುದಿಲ್ಲ. ಕೆಲವರು ಹಣವಿಟ್ಟಿರುವ ಕಪಾಟಿನ ಬೀಗದ ಕೈಯನ್ನು ಹಿಡಿದುಕೊಂಡೋ

ಅಥವಾ ಹಾಸಿಗೆಯ ಕೆಳಗಡೆ ಬಚ್ಚಿಟ್ಟುಕೊಂಡೋ ಸಾಯುತ್ತಾರೆ. ಜಿಪುಣರು ಸಾಯುವಾಗ ಎದೆ ಬಡಿದುಕೊಳ್ಳುತ್ತಾ ತಮ್ಮ ಹಣವನ್ನು ಬಿಟ್ಟು ಹೋಗುವಾಗ ದುಃಖವನ್ನು ವ್ಯಕ್ತಪಡಿಸುತ್ತಾರೆ. ಹೀಗೆ ಅನೇಕ ರೀತಿಯಲ್ಲಿ ಸಾಯುವಾಗ ತಮ್ಮ ಹಣದ ಬಗ್ಗೆ ದುಃಖವನ್ನು ವ್ಯಕ್ತ ಮಾಡುತ್ತಾರೆ.

**ಓ.ಸಂ.108 :** ಶ್ರೀಮಂತನು ಸಾಯುವಾಗ ಅವನು ಮನೆತುಂಬ ಅಪಾರ ಹಣವನ್ನು ಗಳಿಸಿಟ್ಟಿದ್ದರೆ ಆಗ ಅದು ಅವನಿಗೆ ನಷ್ಟವಾಗುತ್ತದೆ. ಏಕೆಂದರೆ ಮರಣ ಹೊಂದಿದಾಗ ಅವನು ಬಿಟ್ಟುಹೋಗುವ ಅಪಾರ ಹಣವು ಅವನ ಹಿಂದೆ ಬರಲಾರದು. ಆದುದರಿಂದ ಅದು ಅವನಿಗೆ ಯಾವುದೇ ರೀತಿಯಲ್ಲಿ ಸಹಾಯ ಮಾಡುವುದಿಲ್ಲ.

**ವಿವರಣೆ :** ಶ್ರೀಮಂತನಿಗೆ ಸಾವು ಬಂದಾಗ ಅಪಾರ ಹಣವನ್ನು ತಾನು ಬಿಟ್ಟು ಹೋಗುತ್ತಿದ್ದೇನೆ ಎಂಬುದರ ಬಗ್ಗೆ ಅವನಿಗೆ ಅತೀವ ದುಃಖವಾಗುತ್ತದೆ ಎಂಬುದನ್ನು ಹಿಂದಿನ ಓವೀಯಲ್ಲಿ ತಿಳಿಸಲಾಗಿದೆ. ಅವನು ಪರಿ-ಪರಿಯಾಗಿ ದುಃಖಿಸಿದರೂ ಕೂಡ ಅಪಾರ ದ್ರವ್ಯವನ್ನು ಅವನು ಬಿಟ್ಟು ಹೋಗುತ್ತಾನೆ. ಅವನು ಸಾಯುವಾಗ ಅವನ ಹಿಂದೆ ದ್ರವ್ಯದ ವಾಸನೆಯು ಹೋಗಬಹುದೇ ವಿನಃ ಅವನ ಜೊತೆಗೆ ಅವನ ಹಣವು ಬರಲಾರದು. ಆ ಹಣವು ಅವನು ಸತ್ತಮೇಲೆ ಯಾವುದೇ ರೀತಿಯಲ್ಲಿಯೂ ಅವನಿಗೆ ಸಹಾಯ ಮಾಡಲಾರದು. ಅಲ್ಲದೇ ಅದು ಅವನಿಗೆ ಅತ್ಯಂತ ದುಃಖವನ್ನು ಕೊಡುತ್ತದೆ. ಆ ಹಣವು ಇಲ್ಲೇ ಇರುವ ಇತರರಿಗೆ ಸಹಾಯವಾಗಬಹುದೇ ವಿನಃ ಅವನಿಗೆ ಮಾತ್ರ ಆಗಲಾರದು. ಇದರ ಬಗ್ಗೆ ಮುಂದಿನ ಓವೀಯಲ್ಲೂ ವಿವರಣೆಯಿರುತ್ತದೆ.

**ಓ.ಸಂ.109 :** ಸತ್ತು ಹೋದ ಶ್ರೀಮಂತನ ಆಸ್ತಿಯನ್ನು ಅವನ ಮಕ್ಕಳು ಉಪಯೋಗಿಸುತ್ತಾರೆ ಎಂದು ಹೇಳಬಹುದು. ಆದರೆ ಅವನು ಸತ್ತಮೇಲೆ ಇವರು ಯಾರ ಮಕ್ಕಳು ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಹಿಂದಿನ ಪುಣ್ಯ-ಪಾಪಾನುಸಾರವಾಗಿ ಪ್ರಾರಬ್ಧದಲ್ಲಿ ಬಂದ ಜನ್ಮಕ್ಕಷ್ಟೇ ಸಂಬಂಧಗಳು ಸೀಮಿತವಾಗಿರುತ್ತವೆ.

**ವಿವರಣೆ :** ಸತ್ತ ಶ್ರೀಮಂತನಿಗೆ ಅವನು ಬಿಟ್ಟು ಹೋದ ದ್ರವ್ಯವು ಯಾವುದೇ ರೀತಿಯಲ್ಲೂ ಸಹಾಯವಾಗಲಿಕ್ಕಿಲ್ಲ. ಆ ದ್ರವ್ಯವನ್ನು ಅವನ ಹೆಂಡತಿ-ಮಕ್ಕಳು ಉಪಯೋಗಿಸುತ್ತಾರೆ ಎಂಬ

ಸಮಾಧಾನವನ್ನು ಹೇಳಬಹುದು. ಆದರೆ ವ್ಯಾವಹಾರಿಕವಾಗಿ ಮಕ್ಕಳಿಗೆ ಆ ದ್ರವ್ಯವನ್ನು ಬಳಸುವ ಹಕ್ಕು ಬರಬಹುದು. ನಿಜದಲ್ಲಿ ಶ್ರೀಮಂತನು ಸಾಯುವ ಪೂರ್ವದಲ್ಲಿ ಮಾತ್ರ ಅವನಿಗೂ ಮತ್ತು ಮಕ್ಕಳಿಗೂ ತಂದೆ-ಮಕ್ಕಳ ಸಂಬಂಧವು ಬರಬಹುದು. ಅವನು ಸತ್ತಮೇಲೆ ಅವರು ಅವನ ಮಕ್ಕಳೆಂದು ಹೇಳಲು ಬರುವುದಿಲ್ಲ. ಶ್ರೀಮಂತನ ಜನ್ಮವು ಅವನ ಹಿಂದಿನ ಪುಣ್ಯ-ಪಾಪ ಕರ್ಮಗಳಿಗನುಸಾರವಾಗಿ ಆದ ಪ್ರಾರಬ್ಧದ ಪರಿಣಾಮವಾಗಿರುತ್ತದೆ. ಸತ್ತಮೇಲೆ ಅವನಿಗೆ ಯಾವುದೇ ಸಂಬಂಧವು ಇರುವಂತಿಲ್ಲ.

**ಓ.ಸಂ.110 :** ಆದುದರಿಂದ ಸತ್ತ ಮನುಷ್ಯನಿಗೆ ವರ್ತಮಾನ ಗೋತ್ರವಾಗಲೀ, ಪುತ್ರನಾಗಲೀ, ಕುಲವಾಗಲೀ ಅಥವಾ ಶತ್ರು-ಮಿತ್ರರಾಗಲೀ - ಹೀಗೆ ಯಾವುದೇ ಸಂಬಂಧವು ಇರಲಾರದು. ಇವರೆಲ್ಲರೂ ಅವನಿಗೆ ಪರಸ್ಪರ ಭಿನ್ನರಾಗಿರುತ್ತಾರೆ.

**ವಿವರಣೆ :** ಸತ್ತು ಹೋದವನ ಹಿಂದಿನ ಪುಣ್ಯ-ಪಾಪಗಳ ಪರಿಣಾಮವಾದ ವರ್ತಮಾನ ಪ್ರಾರಬ್ಧವು ಮುಗಿದು ಹೋಗಿರುತ್ತದೆ. ಆದುದರಿಂದ ಅವನಿಗೆ ಸಾಯುವ ಮೊದಲು ಇದ್ದ ಅವನ ಗೋತ್ರವಾಗಲೀ, ಪುತ್ರನಾಗಲೀ, ಕುಲವಾಗಲೀ ಅಥವಾ ಶತ್ರು-ಮಿತ್ರರಾಗಲೀ, ಸತ್ತಮೇಲೆ ಅವನಿಗೆ ಯಾವುದೇ ರೀತಿಯ ಸಂಬಂಧವನ್ನು ಅನ್ವಯಿಸಲು ಬರುವುದಿಲ್ಲ. ಘಟ-ಶ್ರಾದ್ಧ ಮಾಡಿಕೊಂಡ ಸನ್ಯಾಸಿಗೆ ಇವುಗಳು ಅನ್ವಯಿಸುವಂತಿಲ್ಲ. ಅಂದಮೇಲೆ ಸತ್ತಮೇಲೆ ಈ ಸಂಬಂಧಗಳನ್ನು ಅವನಿಗೆ ಅನ್ವಯಿಸಲು ಬರುವುದಿಲ್ಲ. ಅಂದರೆ ಈ ವರ್ತಮಾನ ಗೋತ್ರ, ಪುತ್ರ, ಕುಲ, ಬಂಧು, ಬಾಂಧವರು ಹಾಗೂ ಶತ್ರು-ಮಿತ್ರರು ಅವನಿಗೆ ಯಾವುದೇ ಸಂಬಂಧವಿಲ್ಲದೇ ಭಿನ್ನರಾಗುತ್ತಾರೆ. ಹಾಗೆಯೇ ಅವನು ಇವರಿಗೆಲ್ಲ ಯಾವುದೇ ಸಂಬಂಧವಿಲ್ಲದೇ ಭಿನ್ನನಾಗಿರುತ್ತಾನೆ.

**ಓ.ಸಂ.111 :** ಹೀಗೆ ಸತ್ತವನಿಗೆ, ಇಲ್ಲಿ ಇರುವವರ ಯಾವ ಸಂಬಂಧವೂ ಇರುವಂತಿಲ್ಲವಾದ್ದರಿಂದ ಅವನು ಮನೆಯಲ್ಲಿ ಉಳಿಸಿದ ಅಥವಾ ಬಿಟ್ಟುಹೋದ ಧನವು ಮಕ್ಕಳಿಂದ ಉಪಯೋಗಿಸಲ್ಪಟ್ಟಿದ್ದರೂ ಇಲ್ಲವೇ ಕಳ್ಳರಿಂದ ದೋಚಲ್ಪಟ್ಟಿದ್ದರೂ ಒಂದೇ ಆಗಿರುತ್ತದೆ. ಆದರೆ ಸತ್ತವನಿಗೆ ಸಾಯುವ ಸಂದರ್ಭ ಬಂದಾಗ ದ್ರವ್ಯವು ದುಃಖವನ್ನೇ ಕೊಡುತ್ತದೆ.

**ವಿವರಣೆ :** ಹೀಗೆ ಹಿಂದಿನ ಪುಣ್ಯ-ಪಾಪಗಳಿಂದಾದ ಪ್ರಾರಬ್ಧವು ತೀರಿದ ಮೇಲೆ ಈ ಲೋಕದ ಯಾವ ಸಂಬಂಧವೂ ಸತ್ತವನಿಗೆ ಇರದು. ಅವನಿಗೆ ತನ್ನ ಹೆಂಡತಿ-ಮಕ್ಕಳು ತನ್ನವರೆಂದಾಗಲೀ ಅಥವಾ ಕಳ್ಳರು ಬೇರೆಯವರು ಎಂದಾಗಲೀ ಇರುವುದಿಲ್ಲ. ಆದುದರಿಂದ ಅವನು ಬಿಟ್ಟು ಹೋದ ಹಣವು ಅವನ ದೃಷ್ಟಿಯಿಂದ ಹೇಗೆ ವಿನಿಯೋಗಿಸಲ್ಪಟ್ಟಿತು ಎನ್ನುವುದು ಅವನಿಗೆ ಸಂಬಂಧ ಪಡುವುದಿಲ್ಲ. ಅದನ್ನು ಅವನ ಹೆಂಡತಿ-ಮಕ್ಕಳು ಉಪಯೋಗಿಸಿದರೂ ಇಲ್ಲವೇ ಕಳ್ಳರೇ ಕದ್ದುಕೊಂಡು ಹೋದರೂ ಎರಡೂ ಒಂದೇ ಆಗಿರುತ್ತದೆ. ಆದರೆ ಅವನಿಗೆ ಮಾತ್ರ ತನ್ನ ಹಣ ಬಿಟ್ಟು ಹೋಗುವಾಗ ಅಪಾರ ದುಃಖವಾಗುವುದು ಅನಿವಾರ್ಯವಾಗಿರುತ್ತದೆ.

**ಓ.ಸಂ.112 :** ಮೃತ್ಯುವಶವಾದವನು ತಾನು ದ್ರವ್ಯಕ್ಕಾಗಿ ಮಾಡಿದ ಪಾಪಕಾರ್ಯಗಳಿಗನುಸಾರವಾಗಿ ಅನೇಕ ರೀತಿಯಲ್ಲಿ ದುಃಖವನ್ನು ಅನುಭವಿಸಬೇಕಾಗುತ್ತದೆ. ಆದುದರಿಂದ ಈ ರೀತಿ ದ್ರವ್ಯವು ದುಃಖಕಾರಕವೆಂಬುವುದು ಸ್ಪಷ್ಟವಿದೆ.

**ವಿವರಣೆ :** ಶ್ರೀಮಂತನು ತಾನು ಸಾಯುವಾಗ ಬಿಟ್ಟುಹೋದ ಸಂಪತ್ತಿಗಾಗಿ ಬಹಳ ದುಃಖವನ್ನು ಅನುಭವಿಸಿರುತ್ತಾನೆ. ಅದನ್ನು ಅವನು ಗಳಿಸುವಾಗ ಪಡಬೇಕಾದ ಕಷ್ಟವನ್ನೂ ಅನುಭವಿಸಿರುತ್ತಾನೆ. ಅವನು ಅನೀತಿ ಹಾಗೂ ಅಧಾರ್ಮಿಕ ಕ್ರಿಯೆಗಳನ್ನು ಮಾಡಿದ್ದರೆ ಆಗ ಕಾನೂನಿನ ವಿರುದ್ಧವಾಗಿ ಮತ್ತು ಸಮಾಜವನ್ನು ಎದುರಿಸುವ ಶಕ್ತಿಯನ್ನು ಹೊಂದಬೇಕಾಗುತ್ತದೆ. ಇದೂ ಕಷ್ಟದ ಕೆಲಸವೇ ಆಗಿರುತ್ತದೆ. ಇಂತಹ ಕ್ರಿಯೆಗಳು ಎಷ್ಟರಮಟ್ಟಿಗೆ ಸಮಾಜಘಾತುಕವಾಗಿದ್ದವು ಅನ್ನುವುದರ ಮೇಲೆ ಅವುಗಳಿಂದ ಎಷ್ಟು ಪಾಪವು ಸಂಚಯವಾಯಿತು ಅನ್ನುವುದು ನಿರ್ಧರಿಸಲ್ಪಡುತ್ತದೆ. ಅಲ್ಲದೇ ಇದನ್ನವಲಂಬಿಸಿ ಅವನಿಗೆ ನರಕವಾಸವೂ ನಿರ್ಧಾರವಾಗುತ್ತದೆ. ನಂತರವೂ ಅವನಿಗೆ ಕೀಳು ಯೋನಿಯಲ್ಲಿ ಹುಟ್ಟುವ ಪ್ರಸಂಗವು ಬರಬಹುದು. ಹೀಗೆ ಹಣವನ್ನು ಗಳಿಸುವಾಗ ಹಾಗೂ ರಕ್ಷಿಸುವಾಗ ಮಾತ್ರವಲ್ಲ ಸಾಯುವಾಗಲೂ ಅದು ದುಃಖವನ್ನು ಕೊಡುವುದಲ್ಲದೇ ಸತ್ತಮೇಲೂ ಕೂಡ ಅದರಿಂದ ದುಃಖವನ್ನು ಅನುಭವಿಸಬೇಕಾಗುತ್ತದೆ.

ಈ ದ್ರವ್ಯದಂತೆಯೇ ಉಳಿದ ಸರ್ವ ವಿಷಯಗಳು ದುಃಖಕಾರಕವೆಂದೂ,

**ಓ.ಸಂ.113 :** ಈ ದ್ರವ್ಯದಂತೆಯೇ ಉಳಿದ ಸರ್ವ ವಿಷಯಗಳು ದುಃಖಕಾರಕವೆಂದೂ, ಶಾಂತವಾಗಿರುವಂತೆ ತನ್ನ ಮನಸ್ಸಿಗೆ ವಿವೇಕಿಯು ಅವುಗಳ ವ್ಯಾಮೋಹವನ್ನು ಬಿಟ್ಟು ಬೋಧಿಸುತ್ತಾನೆ.

**ವಿವರಣೆ :** ಹೀಗೆ ದೀರ್ಘವಾಗಿ ದ್ರವ್ಯವು ಹೇಗೆ ದುಃಖಕಾರಕವೆಂದು ಹೇಳಿದಂತೆ ಉಳಿದ ಒಂದೊಂದು ವಿಷಯಗಳಿಗೂ ಮನಸ್ಸಿಗೆ ಹೇಳಿ ಅದನ್ನು ಆ ವಿಷಯದಿಂದ ಮುಕ್ತ ಮಾಡಬೇಕು. ಬಲಾತ್ಕಾರದಿಂದ ಮನಸ್ಸಿನ ನಿಯಂತ್ರಣವು ತಾತ್ಕಾಲಿಕವಾಗಬಹುದೇ ಹೊರತು ಶಾಶ್ವತವಾಗಿ ಅದು ಉಳಿಯಲಾರದು. ಯಾವ ವಿಷಯದಲ್ಲಿ ವ್ಯಕ್ತಿಗೆ ವ್ಯಸನವಿದೆಯೋ ಅಥವಾ ವಾಸನೆಯಿದೆಯೋ ಆ ವಿಷಯಕ್ಕೆ ಮಹತ್ವಕೊಟ್ಟು ಬುದ್ಧಿಯು ಮನಸ್ಸಿಗೆ ಹೀಗೆ ವಿವೇಕದ ಮಾತನ್ನು ಹೇಳಿ ಆಯಾ ವಿಷಯಗಳ ವ್ಯಾಮೋಹದಿಂದ ಮನಸ್ಸು ಬಿಡಿಸಿಕೊಂಡು ದುಃಖದಿಂದ ಮುಕ್ತವಾಗಬೇಕು. ಹೀಗೆ ಎಲ್ಲ ವಿಷಯಗಳಿಂದ ಮನಸ್ಸಿಗೆ ಮುಕ್ತಿ ಸಿಕ್ಕಾಗಲೇ ಅದಕ್ಕೆ ಶಾಂತಿಯು ಅಥವಾ ಸ್ವಸ್ಥತೆಯು ಲಭಿಸುತ್ತದೆ.

**ಓ.ಸಂ.114 :** ಈ ರೀತಿ ವಿವೇಕಿಯು ತನ್ನ ಮನಸ್ಸಿಗೆ ಬೋಧಿಸಿ ಮನಸ್ಸನ್ನು ಸಕಲ ವಿಷಯಗಳಿಂದಲೂ ವಿಮುಖಗೊಳಿಸುತ್ತಾನೆ. ಇದನ್ನೇ ತಿಳಿದವರು 'ಶಮ' ವೆಂದು ಹೇಳುತ್ತಾರೆ. ಇನ್ನು 'ದಮ' ದ ಬಗ್ಗೆ ವಿವರಣೆಯನ್ನು ಮುಂದಿನ ಓವೀಯಿಂದ ಕೊಡಲಾಗುವುದು.

**ವಿವರಣೆ :** ಸುಮಾರು ಇಪ್ಪತ್ತೈದು ಓವೀಗಳಷ್ಟು ದೀರ್ಘವಾಗಿ 'ಶಮ' ದ ಬಗ್ಗೆ ವಿವರಣೆಯನ್ನು ಕೊಟ್ಟಿರುವುದನ್ನು ನೋಡಿದರೆ ಅದು ಆಧ್ಯಾತ್ಮ ಸಾಧನೆಯಲ್ಲಿ ಎಷ್ಟು ಮಹತ್ವದ್ದಾಗಿದೆ ಎಂದು ತಿಳಿದುಬರುತ್ತದೆ. ಕೇವಲ ವಿಚಾರದಿಂದ ಮನಸ್ಸಿಗೆ ಬೋಧಿಸಿ ಅದಕ್ಕೆ ವಿವೇಕವನ್ನು ಉಂಟುಮಾಡುವುದು ಜ್ಞಾನಮಾರ್ಗದ ಒಂದು ಮುಖ್ಯವಾದ ಲಕ್ಷಣವಾಗಿರುತ್ತದೆ. ಕೇವಲ 'ದ್ರವ್ಯ' ವೆಂಬ ಒಂದು ವಿಷಯದ ಬಗ್ಗೆ ವಿವರವಾಗಿ ಹೇಳಿದರೂ ಉಳಿದ ವಿಷಯಗಳ ಬಗ್ಗೆಯೂ ಹಾಗೆಯೇ ದೀರ್ಘವಾಗಿ ವಿಚಾರಿಸಲು ಸಾಧ್ಯವಿದೆ. ಈಗ 'ದ್ರವ್ಯ' ವೆಂದರೆ 'ಅರ್ಥ'ದ ಬಗ್ಗೆ ಸಾಮಾನ್ಯವಾಗಿ ಹೇಳಿದ್ದು ಅದೇ ರೀತಿ 'ಕಾಮ' ಹಾಗೂ 'ಧರ್ಮ' ದ ಬಗ್ಗೆಯೂ ವಿವೇಕಿಯು ತನ್ನ ಮನಸ್ಸಿಗೆ ಹಿತವಚನವನ್ನು ಬೋಧಿಸಿ ಅದನ್ನು ಎಲ್ಲ ವಿಷಯಗಳಿಂದಲೂ

ವಿಮುಖವಾಗುವಂತೆ ಮಾಡಿ ಮನಸ್ಸಿಗೆ ಶಾಂತಿಯನ್ನು ತರುತ್ತಾನೆ. ಇಲ್ಲಿ 'ಶಮ'ದ ವಿವರಣೆಯು ಮುಗಿಯಿತು. ಈ ಓವೀಯ ಕೊನೆಯ ಚರಣವು 'ದಮ'ದ ಬಗ್ಗೆ ಇದ್ದು ಅದನ್ನು ಮುಂದಿನ ಓವೀಯಲ್ಲಿ ವಿವರಣೆಗಾಗಿ ತೆಗೆದು ಕೊಳ್ಳಲಾಗಿದೆ.

**ಓ.ಸಂ.115 :** ಇನ್ನು 'ದಮ'ದ ಬಗ್ಗೆ ವಿವರಣೆ ಕೊಡಲಾಗುವುದು. ಇಂದ್ರಿಯಗಳನ್ನು ತಮ್ಮ ವಿಷಯಗಳಿಗೆ ಆಕರ್ಷಿತವಾಗುವುದನ್ನು ತಡೆಯುವುದಕ್ಕೆ 'ದಮ'ವೆಂದು ಹೇಳುತ್ತಾರೆ. 'ಶಮ'ವು ಸಾಧಕನಿಗೆ ಸಿದ್ಧಿಸಿದ ಮೇಲೆ ಇದನ್ನು ಅನಾಯಾಸವಾಗಿ ವಶಮಾಡಿಕೊಳ್ಳಬಹುದು.

**ವಿವರಣೆ :** ಈ ಓವೀಯಿಂದ 'ದಮ'ವೆಂಬ ಎರಡನೆಯ 'ಷಟ್ ಸಂಪತ್ತಿ' ನ ವಿವರಣೆಯು ಪ್ರಾರಂಭವಾಗುತ್ತದೆ. ಈ ಓವೀಯಲ್ಲಿ 'ದಮ' ದ ವ್ಯಾಖ್ಯೆಯು ಕೊಡಲ್ಪಟ್ಟಿದೆ. ಇಂದ್ರಿಯಗಳು ತಮ್ಮ ತಮ್ಮ ವಿಷಯಗಳ ಬಗ್ಗೆ ಆಕರ್ಷಿತವಾಗಿ ಆ ವಿಷಯದ ಹಿಂದೆ ಓಡುತ್ತವೆ. ಕಣ್ಣಿಗೆ ರೂಪ, ಕಿವಿಗೆ ಶಬ್ದ, ಹೀಗೆ ಇಂದ್ರಿಯಗಳಿಗೆ ತಮ್ಮದೇ ಆದ ವಿಷಯಗಳಿದ್ದು ಅವುಗಳ ಸಂಪರ್ಕ ಮಾಡಿ ಸಂತೋಷಪಡಲು ಹಾತೊರೆಯುತ್ತವೆ. ಒಳ್ಳೆಯ ದೃಶ್ಯವನ್ನು ನೋಡಬೇಕೆಂದು ಕಣ್ಣು ಇಚ್ಛಿಸಿದರೆ ಕಿವಿಯು ಸುಂದರವಾದ ಹಾಡನ್ನು ಕೇಳಲು ಇಚ್ಛಿಸುತ್ತದೆ. ಹೀಗೆ ವಿಷಯಗಳ ಕಡೆಗೆ ಹೋಗದಂತೆ ತಡೆಯುವುದೇ 'ದಮ' ವಾಗುತ್ತದೆ. ಆದರೆ ಮನಸ್ಸಿನ ನಿಯಂತ್ರಣದಿಂದ 'ಶಮ' ವನ್ನು ಗೆದ್ದಿರುವ ಸಾಧಕನಿಗೆ 'ದಮ'ವು ( ಇಂದ್ರಿಯಗಳ ಮೇಲಿನ ನಿಯಂತ್ರಣವು ) ಸುಲಭವಾಗುತ್ತದೆ. ಇದು ಹೇಗೆ ಎಂಬುದನ್ನು ಮುಂದಿನ ಓವೀಯು ತಿಳಿಸುತ್ತದೆ.

**ಓ.ಸಂ.116 :** ಮನಸ್ಸು ವಿಷಯಗಳ ಕಡೆಗೆ ಹೋಗದೇ ಇದ್ದರೆ ಇಂದ್ರಿಯಗಳಿಗೆ ತಮ್ಮ ತಮ್ಮ ವಿಷಯಗಳ ಸಂಪರ್ಕವು ಸಾಧ್ಯವಾಗುವುದಿಲ್ಲ. ಮನಸ್ಸಿನಿಂದಲೇ ಇಂದ್ರಿಯಗಳಿಗೆ ಚೇತನವು ಬರುತ್ತದೆ.

**ವಿವರಣೆ :** ಮನಸ್ಸಿಗೂ ಮತ್ತು ಇಂದ್ರಿಯಗಳಿಗೂ ಅನ್ಯೋನ್ಯವಾದ ಸಂಬಂಧವುಂಟು. ಜಾಗ್ರತಾವಸ್ಥೆಯಲ್ಲಿ ಈ ಎರಡೂ ಸೇರಿ ಕೆಲಸವನ್ನು ಮಾಡುತ್ತವೆ. ಮೊದಲು ಇಂದ್ರಿಯವು ತನ್ನ ವಿಷಯದಿಂದ ಆಕರ್ಷಿಸಲ್ಪಟ್ಟು ಅದರ ಆಕಾರವನ್ನು ಪಡೆದರೂ ಮನಸ್ಸು ಇಂದ್ರಿಯದ ಜೊತೆಗೆ ಬರದ ಹೊರತು ಆ ವಿಷಯದ ಜ್ಞಾನವಾಗಲೀ ಹಾಗೂ ಆಸ್ವಾದನೆಯಾಗಲೀ

ಸಾಧ್ಯವಿಲ್ಲ. ಕಣ್ಣಿನ ಎದುರಿಗಿರುವ ವಸ್ತುವಿನ ರೂಪದ ಸಂಪರ್ಕವಾದರೂ ಅದು ಯಾವ ವಸ್ತುವಿನ ರೂಪವೆಂದು ಮನಸ್ಸು ಗಮನಿಸದ ಹೊರತು ಹೇಳಲು ಬರುವುದಿಲ್ಲ. ಯಾವುದೇ ವಸ್ತುವಿಲ್ಲದೇ ಅದರ ರೂಪವು ಸ್ವತಂತ್ರವಾಗಿ ಇರುವಂತಿಲ್ಲ. ಶಬ್ದಾದಿ ಇಂದ್ರಿಯ ಸಂವೇದನೆಗಳನ್ನು ಅರ್ಥೈಸಲು ಮನೋವೃತ್ತಿಯು ಪ್ರವೇಶ ಮಾಡದಿದ್ದರೆ ನಮಗೆ ವಿಷಯಗಳ ಆಸ್ವಾದನೆಯೇ ಆಗುವಂತಿಲ್ಲ. ಅಂತಃಕರಣ ಅಥವಾ ಮನೋವೃತ್ತಿಗಳಲ್ಲಿ ಆತ್ಮಚೈತನ್ಯದ ಪ್ರಭೆಯ ಪ್ರತಿಬಿಂಬವು ಇಂದ್ರಿಯ ವೃತ್ತಿಗಳ ಮೇಲೆ ಅಂದರೆ ವಿಷಯಗಳ ಮೇಲೆ ಬೀಳದಿದ್ದರೆ ಇಂದ್ರಿಯಗಳಿಗೆ ಜೀವವೇ ಬರುವುದಿಲ್ಲ. ಆದುದರಿಂದ ಮನಸ್ಸಿನಿಂದಲೇ ಇಂದ್ರಿಯಗಳಿಗೆ ಚೇತನವು ಸಿಕ್ಕು ಅವು ಸಕ್ರಿಯವಾಗುತ್ತವೆ.

**ಓ.ಸಂ.117 :** ಆದರೆ ಅಕಸ್ಮಾತ್ ಮನಸ್ಸು ರೂಢಿಯಂತೆ ಇಂದ್ರಿಯಗಳಿಗೆ ಸಹಕರಿಸಿಬಿಟ್ಟರೆ ಆಗ ಇಂದ್ರಿಯಗಳು ಪ್ರವೃತ್ತರಾಗಿ ಮನಸ್ಸಿನ ಜೊತೆಗೆ ಸೇರಿಕೊಂಡು ವಿಷಯಗಳ ಸಂಪರ್ಕ ಮಾಡುತ್ತವೆ.

**ವಿವರಣೆ :** ಮನಸ್ಸು ಇಂದ್ರಿಯಗಳನ್ನು ಹಿಂಬಾಲಿಸಿ ಹೋಗುವುದು ಅಭ್ಯಾಸವಾಗಿರುತ್ತದೆ. ಮನಸ್ಸಿನ ನಿಯಂತ್ರಣ ಮಾಡಿ 'ಶಮ' ದ ಸಿದ್ಧಿಯನ್ನು ಮಾಡಿಕೊಂಡ ವಿವೇಕಿಗೂ ಕೂಡ ಒಮ್ಮೊಮ್ಮೆ ತನ್ನ ಮನಸ್ಸು ರೂಢಿಯಂತೆ ಇಂದ್ರಿಯಗಳ ಬೆನ್ನು ಹತ್ತಿದರೆ ಆಗ ಇಂದ್ರಿಯಗಳಿಗೆ ಜೀವ ಬಂದು ಅವು ವಿಷಯಗಳ ಕಡೆಗೆ ಪ್ರವರ್ತಿಸುತ್ತವೆ. ಅವು ತಮ್ಮ ತಮ್ಮ ವಿಷಯಗಳ ಕಡೆಗೆ ಮನಸ್ಸಿನ ಸಹಕಾರದಿಂದ ಮನಸ್ಸಿನ ಜೊತೆಗೇ ವಿಷಯಗಳ ಸಂಪರ್ಕ ಮಾಡಿಸಿಬಿಡುತ್ತದೆ. ಹೀಗೆ ಮನಸ್ಸಿಲ್ಲದೇ ಇಂದ್ರಿಯಗಳು ಸಕ್ರಿಯವಾಗುವುದಿಲ್ಲವೆಂಬುದು ನಿಜವಾದರೂ ಒಮ್ಮೊಮ್ಮೆ ಈ ಪ್ರಮಾದವು ಘಟಿಸಿಬಿಡುತ್ತದೆ. ಮುಂದಿನ ಓವೀಯಲ್ಲೂ ಇದೇ ವಿಷಯವು ಮುಂದುವರಿಸಲ್ಪಟ್ಟಿದೆ.

**ಓ.ಸಂ.118 :** ಹೀಗೆ ಅಕಸ್ಮಾತ್ ಮನಸ್ಸಿನ ಸಹಕಾರದಿಂದ ಇಂದ್ರಿಯಗಳು ತಮ್ಮ ವಿಷಯಗಳನ್ನು ಸಂಪರ್ಕ ಮಾಡಿಬಿಟ್ಟರೆ ಆಗ ಇಂದ್ರಿಯಗಳು ತಮ್ಮ ಸಾಮರ್ಥ್ಯವನ್ನು ಹೊಂದಿ ಮನಸ್ಸು ವಿಷಯ ಸುಖವನ್ನು ಅನುಭವಿಸುವಂತೆ ಮಾಡುತ್ತವೆ.

ಇದರಿಂದ ಕ್ಷಣದಲ್ಲಿ ಮಾಡಿದ ವಿಚಾರವು ನಾಶವಾಗಿ ಸಾಧಿಸಿದ 'ಶಮ'ವು ವ್ಯರ್ಥವಾಗಿಬಿಡುತ್ತದೆ.

**ವಿವರಣೆ :** ಸಾಧಕನಿಗೆ 'ಶಮ' ವು ಸಿದ್ಧಿಸಿದರೂ ಕೂಡ 'ದಮ' ವು ಇನ್ನೂ ಸಿದ್ಧಿಸದೇ ಇದ್ದಾಗ ಹೇಗೆ ಸಾಧಕನು ಎಡವುತ್ತಾನೆ ಎಂಬುದನ್ನು ಈ ಓವೀ ತಿಳಿಸುತ್ತದೆ. ಪ್ರತಿ ಪ್ರತ್ಯಕ್ಷಾನುಭವದಲ್ಲೂ ಇಂದ್ರಿಯವು ವಿಷಯಾಕಾರವಾದಕೂಡಲೇ ಮನಸ್ಸೂ ಕೂಡ ಇಂದ್ರಿಯಗಳಿಗೆ ಸಹಕರಿಸಿ ವಿಷಯಾಕಾರವಾದಾಗಲೇ ಪ್ರತ್ಯಕ್ಷಾನುಭವವು ಸಾಧ್ಯವಾಗುತ್ತದೆ. 'ದಮ'ವು ಅಂದರೆ ಇಂದ್ರಿಯ ನಿಯಂತ್ರಣವು ಇನ್ನೂ ಸಿದ್ಧಿಸದೇ ಇರುವುದರಿಂದ ಎಂದಿನಂತೆ ಇಂದ್ರಿಯವು ಅದರದೇ ವಿಷಯದ ಸಂಪರ್ಕ ಪಡೆಯುತ್ತದೆ. ಆಗ ಅಕಸ್ಮಾತ್ ರೂಢಿಯಂತೆ ಮನಸ್ಸೂ ಕೂಡ ಇಂದ್ರಿಯಕ್ಕೆ ಸಹಾಯ ಮಾಡಲು ವಿಷಯಾಕಾರವಾಗಿಬಿಟ್ಟರೆ ಅದರಿಂದ ಇಂದ್ರಿಯಕ್ಕೆ ಜೀವ ಬರುವದು. ಅಲ್ಲದೇ ಅವುಗಳೆರಡಕ್ಕೂ ವಿಷಯದ ಸಂಪರ್ಕ ದೊರೆತು ಅವು ಇನ್ನೂ ಮೊದಲಿಗಿಂತ ಹೆಚ್ಚು ವಿಷಯಗಳಿಂದ ಆಕರ್ಷಿತವಾಗುವುದಕ್ಕೆ ಹೆಚ್ಚಿನ ಸಾಮರ್ಥ್ಯವನ್ನು ಪಡೆಯುತ್ತವೆ ಹಾಗೂ ಮನಸ್ಸನ್ನೂ ತನ್ನ ಜೊತೆಗೆ ವಿಷಯ ಸುಖವನ್ನು ಅನುಭವಿಸುವಂತೆ ಮಾಡಿಬಿಡುತ್ತದೆ. ಇದರಿಂದ ವಿವೇಕಿಯ ವಿಚಾರ ಸಾಮರ್ಥ್ಯವು ನಷ್ಟವಾಗಿ ಈ ವರೆಗೆ ಸಾಧಿಸಿದ 'ಶಮ' ವು ವ್ಯರ್ಥವಾಗಿ ಬಿಡುತ್ತದೆ.

**ಓ.ಸಂ.119 :** ಆದರೆ ಹಿಂದೆ ಒಮ್ಮೆ ಮಾಡಿದ ವಿಚಾರವು ಆಗಾಗ ಮರೆಯುತ್ತಿದ್ದರೂ ಅದು ಎಂದೂ ನಾಶವಾಗುವುದಿಲ್ಲ. ಹೀಗೆ ಮನಸ್ಸಿನ ಚಂಚಲತೆಯಿಂದ ವಿಚಾರವನ್ನು ಮರೆತಾಗ ಇಂದ್ರಿಯಗಳು ಮತ್ತು ಮನಸ್ಸು ಒಂದು ವಿಷಯವನ್ನು ಭೋಗಿಸಿದ ಮೇಲೆ ಅವು ನಿಶ್ಚಲವಾಗಿ ಶಾಂತವಾಗುತ್ತವೆ.

**ವಿವರಣೆ :** ಹಿಂದಿನ ಓವೀಯಲ್ಲಿ 'ಶಮ' ವನ್ನು ಸಾಧಿಸಿದ ಸಾಧಕನ ಮನಸ್ಸು ಅಕಸ್ಮಾತ್ ರೂಢಿಯಂತೆ ಇಂದ್ರಿಯಗಳ ಜೊತೆಗೆ ಸೇರಿಕೊಂಡು ವಿಷಯ ಸುಖವನ್ನು ಅನುಭವಿಸಿಬಿಡಬಹುದು ಎಂದು ವಿವರಿಸಲಾಗಿದೆ. ಇದಕ್ಕೆ ಕಾರಣವೇನೆಂದರೆ ತನಗೆ 'ದಮ'ದ ಸಿದ್ಧಿಯಾಗದಿರುವುದರಿಂದ ಸುಖಕಾರಕವಾದ ವಿಷಯಗಳು ಅವನನ್ನು ಆಕರ್ಷಿಸುತ್ತವೆ. 'ತಾನು ಅವುಗಳ ಕಡೆಗೆ ಗಮನಕೊಡಬಾರದು; ಹಾಗೆ ಮಾಡಿದರೆ

ಹಾಗೂ ಶಾಶ್ವತವಾಗಿ ಪರಮ ಪುರುಷಾರ್ಥವಾದ ಮೋಕ್ಷವು ತಪ್ಪಿಬಿಡಬಹುದು; ಮುಮುಕ್ಷುವಾಗಿ ಆತ್ಮಜ್ಞಾನ ಪಡೆಯಲು ವೈರಾಗ್ಯವೇ ಮುಖ್ಯ ಸಾಧನವಾಗಿರುತ್ತದೆ' – ಹೀಗೆ ಹಿಂದೆ ಮಾಡಿದ ವಿಚಾರ ಸರಣಿಯು ಒಂದು ಕ್ಷಣ ನಾಶವಾಗಿ ಸಾಧಕನ 'ಶಮ' ವು ವ್ಯರ್ಥವಾಗುತ್ತದೆ. ಆದರೆ ಹಿಂದೆ ಒಮ್ಮೆ ಮಾಡಿದ ವಿಚಾರವು ಎಂದೂ ನಾಶವಾಗುವುದಿಲ್ಲ. ಇದು ಹೇಗೆ ನಾಶವಾಗುವುದಿಲ್ಲ ಎಂಬುದನ್ನು ಮುಂದೆ ವಿವರಿಸಲಾಗಿದೆ. ಈ ಓವೀಯ ಕೊನೆಯ ಎರಡು ಚರಣಗಳಲ್ಲಿ ಮತ್ತು ಮುಂದಿನ ಓವೀಯಲ್ಲಿ ಇದರ ವಿವರಣೆ ಇರುತ್ತದೆ. ಈ ಕಾರಣಕ್ಕಾಗಿ ಈ ಓವೀಯ ಕೊನೆಯ ಎರಡು ಚರಣಗಳನ್ನು ಮುಂದಿನ ಓವೀಯಲ್ಲಿ ಸೇರಿಸಿಕೊಂಡು ವಿವರಿಸಲಾಗಿದೆ.

**ಓ.ಸಂ.120 :** ಹೀಗೆ ಅಕಸ್ಮಾತ್ ಸಾಧಕನ 'ಶಮ' ವು ಒಮ್ಮೊಮ್ಮೆ ವ್ಯರ್ಥವಾಗಿಬಿಡುತ್ತದೆ ( ಓವೀ ಸಂ.118 ). ಆ ಕ್ಷಣದಲ್ಲಿ ಮನಸ್ಸು ಮತ್ತು ಇಂದ್ರಿಯಗಳು ವಿಷಯವನ್ನು ಭೋಗಿಸಿ ನಂತರ ನಿಶ್ಚಲವಾಗಿ ಶಾಂತವಾಗುತ್ತವೆ ( ಓವೀ ಸಂ.119). ಆಗ ಹಿಂದಿನ ವಿಚಾರ ಸರಣಿಯು ಪುನಃ ನೆನಪಿಗೆ ಬಂದು ಸಾಧಕನಿಗೆ ಪಶ್ಚಾತ್ತಾಪವು ಉಂಟಾಗುತ್ತದೆ. ಆದುದರಿಂದ ಆ ವಿವೇಕಿಯು ತನ್ನ ಇಂದ್ರಿಯಗಳನ್ನು ಹೇಗೆ ದಮನ ಮಾಡಲಿ ಎಂದು ಯೋಚಿಸುತ್ತಿರುತ್ತಾನೆ.

**ವಿವರಣೆ :** 'ಶಮ' ವನ್ನು ಸಾಧಿಸಿದ ಸಾಧಕನ ಮನಸ್ಸು ಒಂದು ಕ್ಷಣ ಚಂಚಲವಾಗಿ ಬಾಹ್ಯ ವಿಷಯಗಳನ್ನು ಇಂದ್ರಿಯಗಳ ಜೊತೆಗೆ ಭೋಗಿಸಿ ತಾನು ಸಾಧಿಸಿದ 'ಶಮ' ವನ್ನು ವ್ಯರ್ಥಗೊಳಿಸಬಹುದು. ಆದರೆ ಹೀಗೆ ವಿಷಯವನ್ನು ಭೋಗಿಸಿದ ನಂತರ ಮನಸ್ಸು ಮತ್ತು ಇಂದ್ರಿಯಗಳು ನಿಷ್ಕ್ರಿಯವಾಗಿ ಶಾಂತವಾಗುತ್ತವೆ. ನಂತರ ಸಾಧಕನು ತಾನು ಹಿಂದೆ ಮಾಡಿದ ವಿಚಾರ ಸರಣಿಯು ತನಗೆ ಮರೆತುಹೋಗಿ, ಈ ಪ್ರಮಾದವಾಯಿತೆಂದು ತಿಳಿದು ಪಶ್ಚಾತ್ತಾಪ ಪಡುತ್ತಾನೆ. ಒಮ್ಮೆ ಮಾಡಿದ ವಿಚಾರ ಸರಣಿಯು ಹೀಗೆ ನಾಶವಾಗದೇ ನಿರಂತರವಾಗಿ ಅವನ ಸಹಾಯಕ್ಕೆ ಬರುತ್ತದೆ. ಅವನ ವಿವೇಕವು ನಾಶವಾಗದೇ 'ಶಮ' ವು ಇನ್ನೂ ಗಟ್ಟಿಯಾಗುತ್ತದೆ. ಆಗ ಈ ವಿವೇಕಿಯು ಮತ್ತೊಮ್ಮೆ ಅವನ ಇಂದ್ರಿಯಗಳು ತನ್ನ ನಿಯಂತ್ರಣ ಮೀರಿ ಬಾಹ್ಯ ವಿಷಯಗಳನ್ನು ಅರಸಿ ಹೊರಗೆ ಹೋಗದ ಹಾಗೆ ಏನು ಮಾಡಬಹುದು ಎಂಬುದನ್ನು ಕುರಿತು ಗಂಭೀರವಾಗಿ ಯೋಚಿಸುತ್ತಾನೆ.

**ಓ.ಸಂ.121 :** ಸಾಧಕನು ತನ್ನ ಇಂದ್ರಿಯಗಳ ನಿಯಂತ್ರಣವನ್ನು ಸಾಧಿಸಲು ಯುಕ್ತಿಯಿಂದ ( ವಿಚಾರದಿಂದ ) ಉಂಟಾಗುವ ವಿವೇಕವೇ ಅತ್ಯುತ್ತಮ ಸಾಧನವೆಂದು ತಿಳಿಯುತ್ತಾನೆ. ಅಲ್ಲದೇ ಮೊದಲು ಯುಕ್ತಾಹಾರ, ವಿಹಾರ ಹಾಗೂ ಮಧ್ಯಮ ನಿದ್ರೆಯನ್ನು ಮಾಡುವುದರಲ್ಲಿ ನಿಯಂತ್ರಣ ಸಾಧಿಸುತ್ತಾನೆ.

**ವಿವರಣೆ :** ಸಾಧಕನು ವಿಚಾರಮಾಡಿ ತನ್ನ ಇಂದ್ರಿಯಗಳನ್ನು ಹೇಗೆ ದಮನ ( ನಿಯಂತ್ರಣ) ಮಾಡಬೇಕೆಂದು ಗಂಭೀರವಾಗಿ ಆಲೋಚಿಸುತ್ತಾನೆ. ಕೊನೆಗೆ ತನ್ನ ಇಂದ್ರಿಯಗಳನ್ನು ಯುಕ್ತಿಯಿಂದ ಗೆಲ್ಲಬೇಕೆಂದು ಬಲಾತ್ಕಾರದಿಂದ ಇದು ಆಗುವುದಿಲ್ಲವೆಂದು ತಿಳಿದು 'ಶಮ' ಕ್ಕಾಗಿ ತಾನು ಮಾಡಿದ ವಿಚಾರಸರಣಿಯನ್ನೇ ಮುಂದುವರೆಸಿಕೊಂಡು ತಾನು ಪಡೆದ ವಿವೇಕವನ್ನು ಗಟ್ಟಿಮಾಡುತ್ತಾನೆ. ಏಕೆಂದರೆ ಇಂದ್ರಿಯ ನಿಯಂತ್ರಣವು ಮನಸ್ಸಿನ ನಿಯಂತ್ರಣವಿಲ್ಲದೇ ಆಗುವಂತಿಲ್ಲ. ಆದರೂ ಅವನು ಮೊದಲು ತನ್ನ ಇಂದ್ರಿಯಗಳನ್ನು ಹಿತ-ಮಿತವಾದ ಆಹಾರ ( ಯುಕ್ತಾಹಾರ ) ಹಾಗೂ ವಿಹಾರ, ಸಾಕಷ್ಟು ವ್ಯಾಯಾಮ, ವಿಶ್ರಾಂತಿ, ಉಳಿದ ಅನಿವಾರ್ಯವಾದ ವ್ಯವಹಾರ ( ಯುಕ್ತವಿಹಾರ ) ಮತ್ತು ಹೆಚ್ಚೂ ಅಲ್ಲದ, ಕಡಿಮೆಯೂ ಅಲ್ಲದ ನಿದ್ರೆ ಮಾಡುವುದು ( ಮಧ್ಯಮ ನಿದ್ರೆ ) ಇವುಗಳಲ್ಲಿ ನಿಯಂತ್ರಣ ಮಾಡುವುದನ್ನು ಸಾಧಿಸುತ್ತಾನೆ.

**ಓ.ಸಂ.122 :** ಹೀಗೆ ಯುಕ್ತಾಹಾರ-ವಿಹಾರ-ನಿದ್ರೆಗಳನ್ನು ಅಭ್ಯಾಸ ಮಾಡುವುದರಿಂದ ಇಂದ್ರಿಯಗಳ ಸಾಮರ್ಥ್ಯವು ಕುಗ್ಗುತ್ತದೆ. ಇದರಿಂದ ಈ ಇಂದ್ರಿಯಗಳು ಸಾಧಕನ ವಿವೇಕಕ್ಕೆ ವಿಘ್ನ ಉಂಟುಮಾಡದೇ ಸಹಕಾರಿಯಾಗುತ್ತವೆ. ಹೀಗೆ ಇಂದ್ರಿಯಗಳ ನಿಯಂತ್ರಣ ಮಾಡುವುದಕ್ಕೆ 'ದಮ' ವೆನ್ನುತ್ತಾರೆ.

**ವಿವರಣೆ :** 'ದಮ'ದ ವಿವರಣೆಗೆ ಈ ಓವೀಯು ಕೊನೆಯದಾಗಿದ್ದು, ಇದರಲ್ಲಿ ದಮದ ವ್ಯಾಖ್ಯೆಯನ್ನೂ ಕೊಡಲಾಗಿದೆ. ಯುಕ್ತಾಹಾರ, ವಿಹಾರ ಹಾಗೂ ಮಧ್ಯಮ ನಿದ್ರೆಯನ್ನು ಅಭ್ಯಾಸ ಮಾಡಿದ ಸಾಧಕನಿಗೆ ಆರೋಗ್ಯವೂ ಸುಧಾರಿಸುತ್ತದೆ ಮತ್ತು ಹೆಚ್ಚು ಕಾಲಾವಕಾಶವೂ ಸಾಧಕನಿಗೆ ಸಿಗುತ್ತದೆ. ಅಲ್ಲದೇ ಮನಸ್ಸು ಹೆಚ್ಚು ಸಾತ್ವಿಕವಾಗುತ್ತದೆ. ಏಕೆಂದರೆ ತಾಮಸಿಕ ಆಹಾರವನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ತೆಗೆದುಕೊಳ್ಳುವುದು,

ನಿದ್ರೆಯನ್ನು ಬಹಳ ಮಾಡುವುದರಲ್ಲಿ ಆಸಕ್ತಿ ತೋರುವುದು ಮುಂತಾದವುಗಳು ಹೆಚ್ಚು ತಾಮಸಿಕ ಪ್ರವೃತ್ತಿಯನ್ನು ಬೆಳೆಸುತ್ತವೆ. ಈ ರೀತಿಯ ಶಿಸ್ತು ಜೀವನದಿಂದ ಇಂದ್ರಿಯಗಳ ಶಕ್ತಿ ಸ್ವಲ್ಪ ಕುಂದಿದರೂ ಕೂಡ ಅವುಗಳು ಹಿಂದಿನಂತೆ ಸಾಧಕನ ವಿವೇಕಕ್ಕೆ ವಿಘ್ನವನ್ನು ಉಂಟುಮಾಡದೇ ವಿವೇಕಕ್ಕೆ ಸಹಕಾರಿಯಾಗುತ್ತವೆ. ಅಂದರೆ 'ದಮ' ದಿಂದ 'ಶಮ' ವು ರಕ್ಷಿಸಲ್ಪಡುತ್ತದೆ. ಸರಿಯಾದ ವಿಚಾರ ಕ್ರಮದಿಂದ ಉದಯಿಸುವ ವಿವೇಕವೇ 'ಶಮ' ಹಾಗೂ 'ದಮ' ಕ್ಕೆ ಆಧಾರವೆಂಬುದನ್ನು ತಿಳಿಯಬೇಕು. ಆದುದರಿಂದ ಇಂದ್ರಿಯಗಳ ನಿಯಂತ್ರಣವೇ 'ದಮ' ವಾಗಿರುತ್ತದೆ.

**ಓ.ಸಂ.123 :** ಆತ್ಮಜ್ಞಾನಕ್ಕಾಗಿ ವಿಚಾರದಿಂದ, ಶೀತೋಷ್ಣಾದಿ ದ್ವಂದ್ವ ದುಃಖಗಳನ್ನು ಸಹಿಸುವುದಕ್ಕೆ 'ತಿತಿಕ್ಷೆ' ಎಂದು ಹೆಸರು.

**ವಿವರಣೆ :** ಸಾಧನ ಚತುಷ್ಟಯಗಳಲ್ಲಿ ಮೂರನೆಯದಾದ ಷಟ್ ಸಂಪತ್ತುಗಳಲ್ಲಿ ಮೂರನೆಯದೇ 'ತಿತಿಕ್ಷಾ' ಎಂಬುದಾಗಿದೆ. ಈ ಓವೀಯಲ್ಲಿ 'ತಿತಿಕ್ಷಾ' ದ ವ್ಯಾಖ್ಯೆಯನ್ನು ಕೊಡಲಾಗಿದೆ. ಶೀತೋಷ್ಣಾದಿ ದ್ವಂದ್ವ ದುಃಖಗಳನ್ನು ವಿವೇಕದಿಂದ ಸಮಾಧಾನದಿಂದ ಸಹಿಸುವುದೇ 'ತಿತಿಕ್ಷಾ' ವಾಗಿರುತ್ತದೆ. ಇಲ್ಲಿ ಶೀತೋಷ್ಣಾದಿಗಳು ಉಪಲಕ್ಷಣವು ಮಾತ್ರ ಆಗಿದ್ದು ಇವುಗಳಿಂದ ಜೀವನದಲ್ಲಿ ಬರುವ ಅನೇಕ ದುಃಖ ಸಂದರ್ಭಗಳನ್ನು ಆಧ್ಯಾತ್ಮ ಸಾಧನಾ ಮಾರ್ಗದಲ್ಲಿ ವಿಘ್ನ ಬಂದಂತೆ ವಿವೇಕದಿಂದ ಸಹಿಸಿಕೊಳ್ಳಬೇಕು. ಉಳಿದವರು ಅನಿವಾರ್ಯತೆಯಿಂದ ಸಹಿಸಿಕೊಳ್ಳುತ್ತಾರೆ. ಆದರೆ ಈ ವಿವೇಕಿಯು ಜೀವನದಲ್ಲಿ ಬರುವ ಸುಖ-ದುಃಖಗಳನ್ನು ಸಮನಾಗಿ ತೆಗೆದುಕೊಂಡು ಸಮಾಧಾನದಿಂದ ಸಹಿಸಿಕೊಳ್ಳುತ್ತಾನೆ. ಈ ಎಲ್ಲ ಸಾಧನಗಳಲ್ಲಿ ವಿವೇಕವು ದೃಢವಾದರೆ ಮಾತ್ರ ಅವು ತಮಗೆ ತಾವೇ ಅನುಸರಿಸಿಕೊಂಡು ಬರುತ್ತವೆ.

**ಓ.ಸಂ.124 :** ವಿವೇಕ, ವೈರಾಗ್ಯ, ಶಮ, ದಮಗಳ ಸಾಧನೆಯನ್ನು ಸಾಕಷ್ಟು ಮಾಡಿದಾಗ 'ತಿತಿಕ್ಷೆ' ಯು ಸುಲಭವಾಗಿ ದಕ್ಕುತ್ತದೆ. ದೇಹಕ್ಕೆ ಕಷ್ಟವಾಗಬಹುದು. ಆದರೆ ದೇಹವು ಅನಿತ್ಯವಾಗಿರುವುದರಿಂದ ವಿವೇಕ ಹಾಗೂ ಇತರ ಸಾಧನಗಳಿಂದ 'ತಿತಿಕ್ಷೆ'ಯನ್ನು ಸುಲಭವಾಗಿ ಅವಗತ ಮಾಡಿಕೊಳ್ಳಬಹುದು.

**ವಿವರಣೆ :** ಹಿಂದೆ ವಿವರಿಸಿದ ಸಾಧನಗಳು ಎಂದರೆ ವಿವೇಕ, ವೈರಾಗ್ಯ, ಶಮ ಹಾಗೂ ದಮಗಳನ್ನು ಸಾಕಷ್ಟು ಅಭ್ಯಾಸ ಮಾಡಿದಾಗ 'ತಿತಿಕ್ಷೆ' ತನಗೆ ತಾನೇ ಕೈವಶವಾಗುತ್ತದೆ. ಏಕೆಂದರೆ ವಿವೇಕದಿಂದಲೇ ವೈರಾಗ್ಯ, ಶಮ, ದಮಗಳು ಅವಗತವಾಗಿರುವಂತೆ 'ತಿತಿಕ್ಷೆ' ಗೂ ಕೂಡ ಮುಖ್ಯವಾಗಿ ವಿಚಾರ-ವಿವೇಕಗಳೇ ಆಧಾರವಾಗಿವೆ. ಮನುಷ್ಯ ದೇಹಕ್ಕೆ ಅನೇಕ ಕಷ್ಟ ಕಾರ್ಪಣ್ಯಗಳು ಬರುವುದು ಸಹಜವಾಗಿ ಇರುತ್ತವೆ. ಆದರೆ ಅವು ಬಂದಾಗ ವಿಚಾರದಿಂದ ಅವುಗಳನ್ನು ವಿಶ್ಲೇಷಣೆ ಮಾಡಿ ವಿವೇಕದಿಂದ ಅವುಗಳನ್ನು ಸಹಿಸಬೇಕು. ಹೇಗೆಂದರೆ : 'ದೇಹವು ನಿತ್ಯವಲ್ಲ; ಅದು ಅನಿತ್ಯವಾಗಿರುತ್ತದೆ; ಹೀಗಿದ್ದಾಗ ಆಗಾಗ ಬರುವ ದೈಹಿಕ ಕಷ್ಟಗಳ ಬಗ್ಗೆ ಹೆಚ್ಚು ಆಸಕ್ತಿ ವಹಿಸಿದರೆ ಅದರಿಂದ ಹೆಚ್ಚು ಕಾಲಹರಣವಾಗುತ್ತದೆ; ಅದರ ಬದಲು ಆತ್ಮಜ್ಞಾನಕ್ಕಾಗಿ ಹೆಚ್ಚು ಕಾಲವನ್ನು ವಿನಿಯೋಗಿಸಬಹುದು; ದೇಹವು ಬಿದ್ದು ಹೋಗುವ ಮೊದಲೇ ಅಧ್ಯಾತ್ಮ ಸಾಧನೆಯಲ್ಲಿ ಸ್ವಲ್ಪವಾದರೂ ಪ್ರಗತಿಯನ್ನು ಸಾಧಿಸಬೇಕು'. ಎಂದು ವಿಚಾರ ಮಾಡಬೇಕು.

**ಓ.ಸಂ.125 :** ಅನಿತ್ಯವಾದ ದೇಹದ ಬಗ್ಗೆ ಅಭಿಮಾನವನ್ನು ಅಥವಾ ಪ್ರೀತಿಯನ್ನು ಮಾಡಬಾರದು. ನಿತ್ಯ ವಸ್ತುವಿನ ಪ್ರಾಪ್ತಿಯಲ್ಲಿ ಅನೇಕ ವಿಘ್ನಗಳು ಹಾಗೂ ಕಷ್ಟಗಳು ಬಂದರೂ ಅವುಗಳನ್ನು ಸಹಿಸಬೇಕು.

**ವಿವರಣೆ :** ದೇಹದ ಬಗ್ಗೆ ಇರುವ ಅಭಿಮಾನ ಅಥವಾ ಪ್ರೀತಿಯೇ ನಮಗೆ ಬರುವ ದೈಹಿಕ ಕಷ್ಟ-ನಷ್ಟಗಳನ್ನು ಸಹಿಸದಿರಲು ಕಾರಣವಾಗಿರುತ್ತದೆ. ಹೇಗೂ ಒಂದು ದಿನ ಮರಣಹೊಂದುವ ಈ ದೇಹದ ಮೇಲೆ ಪ್ರೀತಿಯನ್ನು ಮಾಡುವುದು ಸಮರ್ಥನೀಯವಲ್ಲ. ರೋಗ-ರುಜಿನಗಳನ್ನು ಪ್ರಾರಬ್ಧಕರ್ಮವೆಂದು ತಿಳಿದು ಸಹನೆಯಿಂದ ಸಹಿಸಬೇಕು. ನಿತ್ಯ ಪ್ರಾಪ್ತವಾದ ಆತ್ಮನನ್ನು ತಿಳಿದುಕೊಳ್ಳಲು ಯಾವುದೇ ವಿಘ್ನವಾದರೂ, ದೈಹಿಕ ಹಾಗೂ ಮಾನಸಿಕ ಬಾಧೆ ಬಂದರೂ ಅವುಗಳನ್ನು ಎದುರಿಸಿ ನಿವಾರಿಸಿಕೊಳ್ಳಬೇಕು. ಇಲ್ಲವೇ ಯಾವುದೇ ಸಮಸ್ಯೆಯು ಬಂದರೂ ಅವುಗಳಿಗೋಸ್ಕರ ಅಧ್ಯಾತ್ಮ ಸಾಧನೆಗೆ ಅವು ವಿಘ್ನವಾಗದಂತೆ ನೋಡಿಕೊಳ್ಳಬೇಕು.

**ಓ.ಸಂ.126 :** ಗುರು ಸೇವೆಯು ಸಿಗಬೇಕಾದರೆ ಸಾಧಕನು ತನಗಾಗುವ ಹಸಿವು, ಬಾಯಾರಿಕೆ, ಚಳಿ, ಗಾಳಿ, ಸೆಕೆ, ಆಯಾಸ, ನಿದ್ದೆಗೆಡುವುದು, ಮುಂತಾದವುಗಳನ್ನು ಶಾಂತವಾಗಿ ಸಹಿಸಲು ಕಲಿಯಬೇಕಾಗುತ್ತದೆ.

**ವಿವರಣೆ :** ಸಾಧಕನ ಅಹಂಕಾರವು ನಾಶವಾಗದ ಹೊರತು ಅವನಿಗೆ ತಾನು ಬ್ರಹ್ಮನಿದ್ದೇನೆಂಬ ಗುರು ಉಪದೇಶವು ಅರ್ಥವಾಗಲು ಸಾಧ್ಯವಿಲ್ಲ. ಏಕೆಂದರೆ ತಾನು ದೇಹವೆಂಬ ಅಹಂಕಾರವನ್ನು ಬಿಡದ ಹೊರತು ತಾನು ಬ್ರಹ್ಮನೇ ಎಂಬುದು ತಿಳಿಯುವುದಿಲ್ಲ. ಆದುದರಿಂದ ಅವನ ಅಹಂಕಾರವನ್ನು ಮರ್ದನ ಮಾಡಲು ಗುರುಸೇವೆಯೊಂದೇ ಅದಕ್ಕೆ ಪರಿಹಾರವಾಗಿದೆ. 'ದೇಹವು ತಾನು' ಎಂಬ ಅಹಂಕಾರವು ಕ್ಷೀಣಿಸುತ್ತಾ ಹೋದಹಾಗೆ ಗುರುವಿನ ಸೇವೆಯನ್ನು ಮಾಡುವುದರಿಂದಾಗುವ ದೇಹ-ದಂಡನೆಯು ಸುಲಭವಾಗಿರುತ್ತದೆ. ಗುರುಸೇವೆಯನ್ನು ನಿರಂತರ ಮಾಡುವಾಗ ಸಾಧಕನು ತನ್ನ ಹಸಿವು-ನೀರಡಿಕೆಗಳನ್ನು ಸಹಿಸಿಕೊಳ್ಳಬೇಕಾಗುತ್ತದೆ. ಚಳಿ-ಬಿಸಿಲುಗಳೆನ್ನದೇ ಸೇವೆಯನ್ನು ಮುಂದುವರಿಸಬೇಕಾಗುತ್ತದೆ. ಗುರುವಿನ ಕಾರ್ಯದಲ್ಲಿ ಮಗ್ನವಾದಾಗ ತನಗೆ ಆಯಾಸವಾದರೂ ಇಲ್ಲವೇ ನಿದ್ದೆಗೆಟ್ಟರೂ ಅವುಗಳನ್ನು ಶಾಂತವಾಗಿ ಸಹಿಸುವ ಗುಣವಿರಬೇಕಾಗುತ್ತದೆ.

**ಓ.ಸಂ.127 :** ಸಂತರ್ಪಣೆಯಲ್ಲಿ ಗುರು-ಶಿಷ್ಯರಿಗೆ ಭೋಜನಕ್ಕೆ ಎಲೆ ಹಾಕುವಷ್ಟರಲ್ಲಿಯೇ ಗುರುವು ಶಿಷ್ಯನನ್ನು ಕರೆದುಕೊಂಡು ಹೊರಟುಬಿಡಬಹುದು. ಆಗ ಉಂಟಾಗುವ ಹಸಿವನ್ನು ಶಿಷ್ಯನು ಸಂತೋಷದಿಂದ ಸಹಿಸಿಕೊಳ್ಳಬೇಕು.

**ವಿವರಣೆ :** ಒಂದುವೇಳೆ ಯಾವುದೋ ಉತ್ಸವದಲ್ಲಿ ಅಥವಾ ಸಮಾರಂಭದಲ್ಲಿ ನಡೆಯುವ ಸಂತರ್ಪಣೆಯಲ್ಲಿ ಊಟಕ್ಕಾಗಿ ಕಾಯುತ್ತಿರುವ ಗುರು-ಶಿಷ್ಯರಿಗೆ ಎಲೆ ಹಾಕುವ ಸಮಯದಲ್ಲಿ ಗುರುವು ಶಿಷ್ಯನನ್ನು ಕರೆದುಕೊಂಡು ಹೊರಟುಬಿಡಬಹುದು. ಆಗ ಶಿಷ್ಯನಿಗೆ ಹಸಿವು ತಡೆದುಕೊಳ್ಳಲಾಗದೇ ಗುರುವಿಗೆ ಊಟ ಮಾಡಿ ಹೊರಡೋಣ ಎಂದು ಒತ್ತಡ ಹೇರದೇ ಹಸಿವನ್ನು ಸಂತೋಷದಿಂದ ಸಹಿಸಿಕೊಳ್ಳಬೇಕು. ಒಂದು ವೇಳೆ ಸಹಿಸಿಕೊಳ್ಳಲಾಗದೇ ಇದ್ದರೆ

ಅಮೂಲ್ಯವಾದ ಗುರು ಉಪದೇಶವು ತಪ್ಪಿಬಿಡಬಹುದು. ಇದರ ಬಗ್ಗೆಯೇ ಮುಂದಿನ ಓವೀಯಲ್ಲಿ ಸಾಕಷ್ಟು ವಿವರಣೆಯನ್ನು ಕೊಡಲಾಗಿದೆ.

**ಓ.ಸಂ.128 :** ಹೀಗೆ ಶಿಷ್ಯನು ಹಸಿವೆಯನ್ನು ತಡೆಯಲಾರದೇ ಊಟಕ್ಕೆ ಉಳಿದರೆ ಗುರುಗಳ ಅನುಗ್ರಹಕ್ಕೆ ಶಿಷ್ಯನು ಪಾತ್ರನಾಗುವುದಿಲ್ಲ. ಅಂತಹ ಶಿಷ್ಯನಿಗೆ ಪರಮಾರ್ಥ ವಿಷಯವು ಲಭಿಸುವುದಿಲ್ಲ. ಅದೇ ರೀತಿ ಗುರುವು ಶಿಷ್ಯನಿಗೆ ನಿದ್ದೆಯ ಸಮಯದಲ್ಲಿ ವೇದಾಂತ ಶ್ರವಣವನ್ನು ಮಾಡಿಸುತ್ತಾನೆ.

---

**ವಿವರಣೆ :** ಸಂತರ್ಪಣೆಯಲ್ಲಿ ಎಲೆ ಹಾಕುವಾಗ ಗುರುವು ಶಿಷ್ಯನ ಜೊತೆಗೆ ಪ್ರಯಾಣ ಹೊರಟು ಬಿಡಬಹುದು. ಹಸಿವೆಯನ್ನು ಸಹಿಸಲಾರದ ಶಿಷ್ಯನು ಗುರುಗಳನ್ನೂ ಊಟಮಾಡಿ ಹೋಗಬೇಕೆಂದು ಪ್ರಾರ್ಥಿಸಿ ಅಲ್ಲೇ ಉಳಿಯಬಹುದು. ಹೀಗೆ ಶಿಷ್ಯನು ಗುರುವಿನ ಮಾತನ್ನು ಉಲ್ಲಂಘಿಸಿದಂತಾಗುವುದರಿಂದ ಗುರುಗಳ ಅನುಗ್ರಹಕ್ಕೆ ಎರವಾಗುತ್ತಾನೆ ಅಂದರೆ ಪಾತ್ರನಾಗುವುದಿಲ್ಲ. ಪ್ರಯಾಣದಲ್ಲಿ ಗುರುವು ಶಿಷ್ಯನಿಗೆ ಏಕಾಂತವು ಸಿಗುವುದರಿಂದ ಗುರುವು ಶಿಷ್ಯನಿಗೆ ಹೇಳಬಹುದಾದ ವೇದಾಂತ ಉಪದೇಶವು ಇದರಿಂದ ತಪ್ಪಿದಂತಾಗುತ್ತದೆ. ಅಲ್ಲದೇ ಸಂತರ್ಪಣೆಯಲ್ಲಿ ಲೌಕಿಕ ಜನರ ಜೊತೆಗೆ ಆಗುವ ಸಂಪರ್ಕದಿಂದ ಶಿಷ್ಯನ ಮನಸ್ಸು ಚಂಚಲವಾಗಬಹುದು ಎಂಬುದು ಶಿಷ್ಯನಿಗೆ ತಿಳಿಯುವುದಿಲ್ಲ. ಇಂತಹ ಮನೋವೃತ್ತಿಯ ಶಿಷ್ಯರಿಗೆ ಪರಮಾರ್ಥ ವಿಷಯವು ದಕ್ಕಲಿಕ್ಕಿಲ್ಲ. ಇದೇ ರೀತಿ ಗುರುವು ಶಿಷ್ಯನಿಗೆ ಮಲಗುವ ಸಮಯದಲ್ಲಿ ಬೋಧನೆಯನ್ನು ಪ್ರಾರಂಭಿಸಬಹುದು. ಇಂತಹ ಸಮಯದಲ್ಲಿ ಶಿಷ್ಯನಿಗೆ ಗುರುಗಳ ಮೇಲೆ ಭಕ್ತಿ ಮತ್ತು ಶ್ರದ್ಧೆ ಇದ್ದರೆ ಆಗ ಬೋಧನೆಯಲ್ಲಿ ಆಸಕ್ತಿ ವಹಿಸಿ ಕೇಳುತ್ತಾನೆ, ಇಲ್ಲದಿದ್ದರೆ ತೂಕಡಿಸುತ್ತಾನೆ.

**ಓ.ಸಂ.129 :** ಹೀಗೆ ನಿದ್ರೆಯ ಸಮಯದಲ್ಲಿ ಗುರುವು ಬೋಧನೆಯನ್ನು ಪ್ರಾರಂಭಿಸಿದರೆ ಶಿಷ್ಯನು ತೂಕಡಿಸಹತ್ತಿದರೆ ಅಧ್ಯಾತ್ಮ ಬೋಧನೆಯ ಉಪಯೋಗವಾಗುವುದಿಲ್ಲ. ಜಾಗರಣ ಮಾಡುವುದನ್ನು ಶಿಷ್ಯನು ಅಭ್ಯಾಸ ಆದುದರಿಂದ ಇಂತಹ ಸಂದರ್ಭದಲ್ಲಿ ನಿದ್ದೆಗೆಟ್ಟು ಜಾಗರಣ ಮಾಡುವುದನ್ನು ಶಿಷ್ಯನು ಅಭ್ಯಾಸ ಮಾಡಬೇಕು.

**ವಿವರಣೆ :** ಹಿಂದಿನ ಓವೀಯಲ್ಲಿ ಹೇಳಿದಂತೆ ಶಿಷ್ಯನು ಹೇಗೆ ಹಸಿವೆ ನೀರಡಿಕೆಗಳನ್ನು ಸಹನ ಮಾಡಬೇಕೋ ಹಾಗೆಯೇ ಜಾಗರಣ ಮಾಡುವುದನ್ನೂ ಅಭ್ಯಾಸಮಾಡಬೇಕು. ಗುರುವು ಶಿಷ್ಯನಿಗೆ ನಿದ್ರೆ ಬರುವವೇಳೆಗೆ ಅಥವಾ ಬೆಳಗಿನ ಜಾವ ನಾಲ್ಕು- ಐದು ಗಂಟೆಗೇ ( ನಿದ್ರೆ ಮಾಡುವ ವೇಳೆ) ಶಿಷ್ಯನನ್ನು ಸಾಧನೆ ಮಾಡಲು ಅಥವಾ ಬೋಧನೆಯನ್ನು ಕೇಳಲು ಕರೆಯಬಹುದು. ಆಗ ಶಿಷ್ಯನು ತೂಕಡಿಸುತ್ತಿದ್ದರೆ ಅವನು ಮಾಡುವ ಸಾಧನೆಯಾಗಲೀ ಅಥವಾ ಗುರುಗಳ ಬೋಧನೆಯಾಗಲೀ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಹೀಗೆ ಪರಮಾರ್ಥದಲ್ಲಿ ಆಸಕ್ತಿ ಇಲ್ಲದ ಶಿಷ್ಯನಿಗೆ ಕ್ಲಿಷ್ಟ ವೇದಾಂತ ವಿಚಾರಗಳು ಅರ್ಥವಾಗುವಂತಿಲ್ಲ. ಅಂತಹವರಿಗೆ ಅಹಂಕಾರ-ತ್ಯಾಗ ಅಥವಾ ಚಿತ್ತ-ಶುದ್ಧಿಯ ಅವಶ್ಯಕತೆ ಇರುತ್ತದೆ. ಅದು ಅನೇಕ ರೀತಿಯಲ್ಲಿ ಗುರುಸೇವೆಯಿಂದಲೇ ಲಭಿಸುತ್ತದೆ. ಆದುದರಿಂದ ಪರಮಾರ್ಥದಲ್ಲಿರುವ ಸಾಧಕರು ಹಸಿವು-ನೀರಡಿಕೆಗಳನ್ನು ಸಹಿಸುವಂತೆ, ಬಹುಶ್ರಮ ವಹಿಸುವುದು, ಜಾಗರಣ ಮಾಡುವುದು ಹಾಗೂ ಮುಂತಾದುವುಗಳ ಸಹನೆಯನ್ನು ಮಾಡಬೇಕು.

**ಓ.ಸಂ.130 :** ಅಧ್ಯಾತ್ಮ ಸಾಧಕರ ಪಾರಮಾರ್ಥಿಕ ಆಚಾರಣೆಯು ಸಾಮಾನ್ಯ ಲೌಕಿಕ ಜನರ ಆಚರಣೆಗಿಂತ ಭಿನ್ನವಾಗಿರುವುದು ಸ್ವಾಭಾವಿಕವಾಗಿರುತ್ತದೆ. ಈ ರೀತಿಯ ಸಾಧಕರ ಭಿನ್ನ ವರ್ತನೆಯನ್ನು ತಿಳಿಯದ ಮೂಢರು ಅನೇಕ ರೀತಿಯಲ್ಲಿ ನಿಂದಿಸುತ್ತಾರೆ.

**ವಿವರಣೆ :** ಅಧ್ಯಾತ್ಮ ಸಾಧಕನು ಉಳಿದವರಂತೆ ಕಾಲಹರಣ ಮಾಡುವುದು, ಹಾಳು ಹರಟೆ ಹೊಡೆಯುವುದು, ಸಿನಿಮಾ, ನಾಟಕ, ಮುಂತಾದ ಲೌಕಿಕ ವಿಷಯಗಳಲ್ಲಿ ಹೆಚ್ಚು ಆಸಕ್ತಿ ತೋರುವುದು, ಮುಂತಾದವುಗಳನ್ನು ಮಾಡುವಂತಿಲ್ಲ. ಹಾಗೆಯೇ ಅಧ್ಯಾತ್ಮ ಸಾಧಕನು ಉಳಿದ ಸಾಮಾನ್ಯ ಜನರಿಗಿಂತ ಭಿನ್ನವಾಗಿ ಹಿತ-ಮಿತವಾದ ಆಹಾರ, ವಿಹಾರ ಮತ್ತು ನಿದ್ರೆಗಳನ್ನು ಮಾಡುವುದು ಆಗಾಗ ಮೌನ ಮಾಡುವುದು, ಅಧ್ಯಾತ್ಮ ಪ್ರವಚನಗಳಲ್ಲಿ ಹಾಗೂ ಅಧ್ಯಾತ್ಮ ಪುಸ್ತಕಗಳನ್ನು ಓದುವುದರಲ್ಲಿ ಆಸಕ್ತಿ ತೋರುವುದು, ಸಾಧು ಸಂತರ ಹಾಗೂ ತಿಳಿದವರಲ್ಲಿ ಸತ್ಸಂಗ ಮಾಡುವುದು, ಮುಂತಾದವುಗಳಲ್ಲಿ ಆಸಕ್ತಿ ತೋರಿಸುತ್ತಾನೆ. ಅಧ್ಯಾತ್ಮ ಸಾಧಕನ ಈ ಭಿನ್ನ ವರ್ತನೆಯನ್ನು ಸಾಮಾನ್ಯ ಮೂಢ ಜನರು ನಿಂದಿಸುವುದು ಸ್ವಾಭಾವಿಕವಾಗಿರುತ್ತದೆ. ಮುಂದಿನ ಅನೇಕ ಓವೀಗಳು ಇದೇ ವಿಷಯದ ಬಗ್ಗೆ ವಿವರಣೆಯನ್ನು ಕೊಡುತ್ತವೆ.

**ಓ.ಸಂ.131 :** ಹೀಗೆ ಅಧ್ಯಾತ್ಮ ಸಾಧಕನನ್ನು ನಿಂದಿಸುವ ಹಾಗೂ ವಿಷಯ-ಲಂಪಟ-ಮೂರ್ಖ-ಜನರಿಂದ ತುಂಬಿರುವ ಈ ಸಮಾಜದಲ್ಲಿ ಸಾಧಕನೊಬ್ಬನೇ ಅವರಿಗೆಲ್ಲ ತಿಳಿಸಿ ಹೇಳುವುದು ಸಾಧ್ಯವಿಲ್ಲ.

**ವಿವರಣೆ :** ಮಾನವರಲ್ಲಿ ದೇವರನ್ನು ನಂಬುವವರು ಹಾಗೂ ಧರ್ಮವನ್ನು ನಂಬಿ ಧರ್ಮಕಾರ್ಯಗಳನ್ನು ನಿಷ್ಠೆಯಿಂದ ಮಾಡುವವರು ಬಹಳ ಜನರಿದ್ದಾರೆ. ಆದರೆ ಅಧ್ಯಾತ್ಮ ಪ್ರವೃತ್ತಿ ಇರುವವರು ಮಾತ್ರ ಬಹಳ ವಿರಳವಾಗಿರುತ್ತಾರೆ. ಆದುದರಿಂದ ಈ ಅಧ್ಯಾತ್ಮ ಪ್ರವೃತ್ತಿ ಇರುವವರ ವರ್ತನೆಯು ಇತರರಿಂದ ಟೀಕೆಗೆ ಒಳಗಾಗುವುದು ಸ್ವಾಭಾವಿಕವಾಗಿರುತ್ತದೆ. ಲೌಕಿಕ ಧರ್ಮ, ಅರ್ಥ, ಕಾಮಗಳನ್ನೇ ನಂಬಿರುವ ಈ ಬಹು ಸಂಖ್ಯಾತ ವಿಷಯಲಂಪಟರಾದ ಈ ಮೂಢ ಜನರು ಮಾಡುವ ಅನೇಕ ನಿಂದನೆಗಳಿಗೆ ಅಧ್ಯಾತ್ಮ ಸಾಧಕನೊಬ್ಬನೇ ಉತ್ತರಿಸುವುದು ಮತ್ತು ಅವರನ್ನು ಸಮಾಧಾನಗೊಳಿಸುವುದು ಸಾಧ್ಯವಿಲ್ಲದ ಮಾತು. ಇದರಿಂದಾಗುವ ಕಾಲಹರಣವು ಅನಿವಾರ್ಯವಾಗಿ ಅದು ವ್ಯರ್ಥಪ್ರಯತ್ನವಾಗುವುದು. ಆದುದರಿಂದ ಸಾಧಕನು ಈ ನಿಂದನೆಗಳನ್ನು ಸಹಸಿಕೊಳ್ಳುವುದನ್ನು ಅಭ್ಯಾಸಮಾಡಬೇಕು.

**ಓ.ಸಂ.132 :** ಅಸಂಖ್ಯಾತ ಕಲ್ಲುಗಳಲ್ಲಿ ರತ್ನವು ಸಿಗುವುದು ಹೇಗೆ ಅಪರೂಪವೋ ಹಾಗೆಯೇ ವಿಷಯ ಲಂಪಟರಿಂದ ತುಂಬಿರುವ ಈ ಜಗತ್ತಿನಲ್ಲಿ ಮುಮುಕ್ಷುಗಳಾದ ಅಧ್ಯಾತ್ಮ ಸಾಧಕರು ಸಿಗುವುದು ವಿರಳ.

**ವಿವರಣೆ :** ಈ ಓವೀಯಲ್ಲಿ ಬಹು ಸಂಖ್ಯಾತ ಮೂಢರಿಗೂ ಕೆಲವೇ ಸಾಧು ಸಂತರಿಗೂ ಹೋಲಿಸಿರುವ ಒಂದು ಸುಂದರವಾದ ಉಪಮಾನವಿರುತ್ತದೆ. ಜಗತ್ತಿನಲ್ಲಿರುವ ಅಸಂಖ್ಯಾತ ಕಲ್ಲುಗಳಲ್ಲಿ ಎಲ್ಲೋ ಒಂದು ಅಪರೂಪಕ್ಕೆ ರತ್ನವು ಸಿಗಬಹುದು. ತಿಳಿದವರು ಈ ರತ್ನವನ್ನು ಹುಡುಕಿಕೊಂಡು ತರುತ್ತಾರೆಯೇ ಹೊರತು ಕಲ್ಲುಗಳನ್ನಲ್ಲ. ಅಂದರೆ ರತ್ನಕ್ಕೆ ಇರುವ ಬೆಲೆಯನ್ನು ಸಾಮಾನ್ಯವಾಗಿ ಕಲ್ಲಿಗೆ ಹೋಲಿಸಿದರೆ ಕಲ್ಲಿನ ಬೆಲೆ ನಗಣ್ಯವೆನಿಸುತ್ತದೆ. ಹಾಗೆಯೇ ಬಹು ಸಂಖ್ಯಾತ ವಿಷಯ ಸುಖವನ್ನು ಬಯಸುವ ಈ ಮೂಢ ಜನರಲ್ಲಿ ಅಧ್ಯಾತ್ಮ ಸಾಧಕರೂ, ಮುಮುಕ್ಷುಗಳೂ ಆದ ಜನರು ಸಿಗುವುದು ಬಹಳ ಅಪರೂಪವಾಗಿರುತ್ತದೆ.

ಮರಳಿನಿಂದ ಎಣ್ಣೆಯನ್ನು ತೆಗೆಯಬಹುದು. ದಾವಾಗ್ನಿಯನ್ನು ಆರಿಸಬಹುದು.

**ಓ.ಸಂ.133 :** ಮರಳಿನಿಂದ ಎಣ್ಣೆಯನ್ನು ತೆಗೆಯಬಹುದು. ದಾವಾಗ್ನಿಯನ್ನು ಆರಿಸಬಹುದು. ಆದರೆ ಈ ಮೂರ್ಖ ಸಾಮಾನ್ಯ ಜನರ ನಿಂದೆಗೆ ಪ್ರತಿಯಾಗಿ ಅವರಿಗೆ ತಿಳಿಸಿ ಹೇಳುವುದು ಸಾಧ್ಯವಿಲ್ಲ.

**ವಿವರಣೆ :** ಈ ಬಹುಸಂಖ್ಯಾತ ಮೂರ್ಖ ಜನರ ಮಧ್ಯೆ ಒಬ್ಬ ಅಧ್ಯಾತ್ಮ ಸಾಧಕನು ಜೀವಿಸುವುದು ಬಹಳ ಕಷ್ಟ. ಅಧ್ಯಾತ್ಮ ವಿಷಯವನ್ನು ಏನೂ ತಿಳಿಯದಿದ್ದರೂ, ಬೇರೆ ಬೇರೆ ರಂಗದಲ್ಲಿ ಕೆಲಸ ಮಾಡುವವರು ಅಧ್ಯಾತ್ಮದ ಬಗ್ಗೆ ತಮ್ಮದೇ ಆದ ವಿಚಾರ ಧಾರೆಯನ್ನು ಇಟ್ಟುಕೊಂಡು ಈ ಸಾಧಕನ ಮೇಲೆ ಹೇರಲು ಪ್ರಯತ್ನಿಸುತ್ತಾರೆ. ಅಂತಹವರನ್ನು ಒಪ್ಪಿಸುವುದು ಸಾಧ್ಯವಿಲ್ಲ. ಸಾಧಕನ ವಿಚಾರಧಾರೆಯ ಬಗ್ಗೆ ಹಾಗೂ ಸಾಧನದ ಬಗ್ಗೆ ಬಹಳಷ್ಟು ಟೀಕೆಯನ್ನು ಮಾಡುತ್ತಾರೆ. ಅಸಾಧ್ಯವಾಗಿರುವುದನ್ನು ಸಾಧಿಸಬಹುದೇ ಹೊರತು ಇವರನ್ನು ಒಪ್ಪಿಸುವುದು ನಿಶ್ಚಿತವಾಗಿಯೂ ಆಗದ ಸಂಗತಿ. ಮರಳಿನಿಂದ ಎಣ್ಣೆಯನ್ನು ಹೇಗಾದರೂ ಮಾಡಿ ತೆಗೆಯಬಹುದು. ಹಾಗೆಯೇ ಆರಿಸಲು ಬಾರದಂತಹ ದಾವಾಗ್ನಿಯನ್ನು ಅಂದರೆ ಕಾಡ್ಗಿಚ್ಚನ್ನು ಆರಿಸಿಬಿಡಬಹುದು. ಆದರೆ ಈ ಮೂರ್ಖರನ್ನು ಒಪ್ಪಿಸಿ ಸಮಾಧಾನಪಡಿಸುವುದು ಸಾಧ್ಯವಿಲ್ಲ ಎನ್ನುವುದು ನಿಶ್ಚಯ.

**ಓ.ಸಂ.134 :** ಈ ಮೂರ್ಖ ಜನರಿಗೆ ವಿಚಾರ ಶಕ್ತಿಯೇ ಇರುವುದಿಲ್ಲ. ಆದರೂ ಇವರು ವಿವೇಕಿಯಾದ ಸಾಧಕನನ್ನುನಿಂದಿಸುತ್ತಾರೆ.

**ವಿವರಣೆ :** ಸಾಮಾನ್ಯ ಜನರಿಗೆ ವಿಷಯಗಳಲ್ಲಿ ಹೆಚ್ಚು ಆಸಕ್ತಿ ಇರುತ್ತದೆ. ಅವರಿಗೆ ಅಧ್ಯಾತ್ಮ ವಿಷಯದಲ್ಲಿ ಯಾವ ಆಸಕ್ತಿಯೂ ಇರುವುದಿಲ್ಲ. ವೇದಾಂತದ ಪ್ರವಚನಗಳನ್ನು ಅವರು ಕೇಳಿದರೂ ಅವರಿಗೆ ಅರ್ಥಮಾಡಿಕೊಳ್ಳುವ ಶಕ್ತಿಯು ಇರುವುದಿಲ್ಲ. ಹೀಗೆ ವಿಚಾರ ಶಕ್ತಿಯೇ ಇಲ್ಲದ ಈ ಮೂರ್ಖರಿಗೆ ಅಹಂಕಾರವು ಹೆಚ್ಚಾಗಿರುತ್ತದೆ. ಇಂತಹವರು ವಿಚಾರವಂತನಾದ ಅಧ್ಯಾತ್ಮ ಸಾಧಕನಿಗೆ ಅನೇಕ ರೀತಿಯಲ್ಲಿ ಅವಹೇಳನ ಮಾಡಿ ಟೀಕೆಯನ್ನು ಮಾಡುತ್ತಾರೆ. ತಮ್ಮ ವಿಚಾರಗಳನ್ನು ಸಾಧಕನ ಮೇಲೆ ಹೇರಲು ನೋಡುತ್ತಾರೆ. ಸಾಧಕನು ಹೇಳುವ ಮಾತನ್ನು ಪೂರ್ತಿ ಕೇಳಿಸಿಕೊಳ್ಳುವ ವ್ಯವಧಾನವನ್ನೂ ತೋರಿಸುವುದಿಲ್ಲ. ಈ ಓವೀಯ ಕೊನೆಯ ಎರಡು ಚರಣಗಳನ್ನು ಮುಂದಿನ ಓವೀಯಲ್ಲಿ ವಿವರಿಸಲಾಗಿದೆ.

**ಓ.ಸಂ.135 :** ವಿಚಾರವಂತ ಸಾಧಕನು ಈ ಮೂರ್ಖರಿಗೆ ತಿಳಿಸಿಹೇಳುವ ಪ್ರಯತ್ನ ಮಾಡಿದರೆ ಅವನನ್ನು ದೊಡ್ಡ ವೇದಾಂತಿ ಆದನೆಂದು ಚುಚ್ಚು ಮಾತನ್ನಾಡುತ್ತಾರೆ. ಹೀಗೆ ಈ ಮೂರ್ಖರು ತಮ್ಮ ಹಿತವನ್ನೇ ತಿಳಿಯದೇ ಆ ವಿವೇಕಿಯನ್ನು ನಿಂದಿಸುತ್ತಾರೆ.

**ವಿವರಣೆ :** ಹಿಂದಿನ ಓವೀಯ ಕೊನೆಯ ಎರಡು ಚರಣಗಳನ್ನು ಈ ಓವೀಯಲ್ಲಿ ತೆಗೆದುಕೊಂಡು ವಿವರಿಸಲಾಗಿದೆ. ಮೂರ್ಖ ಜನರು ವಿವೇಕಿಯಾದ ಸಾಧಕನನ್ನು ಅವಹೇಳನ ಮಾಡಿದಾಗ ಈ ಸಾಧಕನು ಅವರಿಗೆ ಅವನ ಅಭಿಪ್ರಾಯವನ್ನು ತಿಳಿಸಿಹೇಳುವ ಪ್ರಯತ್ನವನ್ನು ಮಾಡಿದ್ದೇ ಆದರೆ ಅವನನ್ನು 'ದೊಡ್ಡ ವೇದಾಂತಿಯಾಗಿಬಿಟ್ಟ'; 'ನಮಗೇ ಬುದ್ಧಿ ಹೇಳಲು ಬಂದ' ಎಂದು ಕೊಂಕು ನುಡಿಯುತ್ತಾರೆ. ವೇದಾಂತ ವಿಷಯವು ತಮಗೂ ನಿಜವಾಗಿ ಹಿತವನ್ನು ಮಾಡುತ್ತದೆ ಎಂಬ ಸತ್ಯವನ್ನು ತಿಳಿಯದೇ ಹೀಗೆ ವಿನಾಕಾರಣ ವಿವೇಕಿಯಾದ ಸಾಧಕನನ್ನು ಹೀಯಾಳಿಸುತ್ತಾರೆ. ಇದನ್ನೆಲ್ಲ ಸಹಿಸುವುದಕ್ಕೆ 'ತಿತಿಕ್ಷಾ' ಎಂದು ಹೆಸರು.

**ಓ.ಸಂ.136 :** ಈ ಮೂರ್ಖ ಜನರು ಸ್ವಲ್ಪ ಲೌಕಿಕ ವಿದ್ಯೆಯನ್ನು ಕಲಿತ ಕೂಡಲೇ ತಾವು ಅತಿ ಬುದ್ಧಿವಂತರೆಂದು ಭಾವಿಸುತ್ತಾರೆ. ಇವರು ಅಧ್ಯಾತ್ಮ ಸಾಧಕರನ್ನು ಟೀಕಿಸುತ್ತಾರೆ. ಇವರಿಗೆ ತಿರುಗಿ ಬುದ್ಧಿಮಾತು ಹೇಳಿದರೆ ಸಿಟ್ಟಿಗೇಳುತ್ತಾರೆ.

**ವಿವರಣೆ :** 'ಅಲ್ಪ-ವಿದ್ಯಾ ಮಹಾ-ಗರ್ವೀ' ಎನ್ನುವಂತೆ ಈ ಲೌಕಿಕ ಜನರು ಅಲ್ಪ ಸ್ವಲ್ಪ ಕಲಿತು ವ್ಯಾವಹಾರಿಕ ವೃತ್ತಿಯನ್ನು ಕೈಕೊಂಡಿರುತ್ತಾರೆ. ಸ್ವಲ್ಪ ಆರ್ಥಿಕ ಪರಿಸ್ಥಿತಿ ಸುಧಾರಿಸಿದ ಕೂಡಲೇ ಅವರಿಗೆ ಅಹಂಕಾರದಿಂದ ತಲೆ ತಿರುಗಿ ಹೋಗುತ್ತದೆ. ಅವರು ಸಾಧು ಸ್ವರೂಪದ ಸಾಧಕರನ್ನು ಟೀಕಿಸಲು ಪ್ರಾರಂಭಿಸುತ್ತಾರೆ. ಅವರ ಸಾಧನಗಳನ್ನು ಹಾಗೂ ರೀತಿ-ನೀತಿಗಳನ್ನು ಹೀಯಾಳಿಸುತ್ತಾರೆ ಮತ್ತು ಅವರು ಸದಾ ಓದುತ್ತಿರುವ ಗ್ರಂಥಗಳನ್ನು ಕುರಿತು ಅವರವರೊಳಗೇ ಮಾಡುವ ಗಂಭೀರ ಚರ್ಚೆಗಳನ್ನು ಅವು ತಮಗೆ ಅರ್ಥವಾಗದಿದ್ದರೂ ಕೂಡ ಅವು ವ್ಯರ್ಥವೆಂದೂ, ಕಾಲಹರಣ ಮಾಡಲು ಸಹಕಾರಿಯೆಂದೂ, ಸೋಮಾರಿಗಳು ಮಾತ್ರ ಹೀಗೆ ಮಾಡುತ್ತಾರೆಂದೂ, ಜರಿಯುತ್ತಾರೆ. ಅವರ ಗುರುಗಳ ಬಗ್ಗೆಯೂ ಈ ಮೂರ್ಖರು ಹಗುರವಾಗಿ ಮಾತನಾಡುತ್ತಾರೆ ಹಾಗೂ ಕೊಂಕು ನುಡಿಯುತ್ತಾರೆ. ಇವರಿಗೆ ತಿರುಗಿ ಸಾಧಕರು ಏನಾದರೂ ಬುದ್ಧಿ ಮಾತು ಹೇಳಲು ಹೋದರೆ ಆ ಮಾತನ್ನು ಕೇಳಿಸಿಕೊಳ್ಳದೇ

ಅರ್ಥಕ್ಕೇ ತಡೆದು ಸಿಟ್ಟಿಗೇಳುತ್ತಾರೆ. ಇಂತಹ ಮೂರ್ಖರ ವರ್ತನೆಯನ್ನು ಸಾಧಕರು ಸಹಿಸಲು ಕಲಿಯಬೇಕು.

**ಓ.ಸಂ.137 :** ಈ ರೀತಿ ಮೂರ್ಖ ಜನರು ಸಾಧಕರನ್ನು ಟೀಕಿಸುವುದು ತಪ್ಪಿಸಲಾಗದ ಅನಿವಾರ್ಯವಾಗಿರುತ್ತದೆ. ಅದನ್ನೆಲ್ಲ ಸಹಿಸಲು ಆಗದವರು ಆಧ್ಯಾತ್ಮಿಕ ಮಾರ್ಗದಲ್ಲಿ ಮುಂದುವರೆಯುವುದನ್ನು ನಿಲ್ಲಿಸಿ ಲೌಕಿಕ ಮಾರ್ಗವನ್ನು ಹಿಡಿಯಬೇಕಾಗುವುದು.

**ವಿವರಣೆ :** ಹೀಗೆ ಈ ಮೂರ್ಖ ಜನರು ಸಾಧು ಸಂತರನ್ನು ಟೀಕಿಸುವುದನ್ನು ತಪ್ಪಿಸಲಾಗುವುದಿಲ್ಲ. ಅವರೊಡನೆ ಚರ್ಚಿಸುವುದಾಗಲೀ ಅಥವಾ ಅವರಿಗೆ ಬುದ್ಧಿ ಮಾತನ್ನು ಹೇಳುವುದಾಗಲೀ ಸಾಧ್ಯವಿಲ್ಲ. ಏಕೆಂದರೆ ಅದಕ್ಕೆ ಅವರು ಆಸ್ಪದ ಕೊಡುವುದೇ ಇಲ್ಲ. ಅವರನ್ನು ಒಪ್ಪಿಸುವುದೆಂದರೆ ಹಿಂದೆ ಹೇಳಿದಂತೆ ಮರಳನ್ನು ಹಿಂಡಿ ಎಣ್ಣೆ ತೆಗೆದಂತೆಯೇ ಸರಿ. ಹೀಗಾಗಿ ಜನರ ಟೀಕೆಯು ತಪ್ಪಿಸಲಾಗದ ಅನಿವಾರ್ಯವಾಗಿರುತ್ತದೆ. ಆದುದರಿಂದ ಆಧ್ಯಾತ್ಮಿಕ ಮಾರ್ಗದಲ್ಲಿ ಹೋಗುವವರು ಅವರನ್ನು ಸಹಿಸಿಕೊಳ್ಳದೇ ಬೇರೆ ವಿಧಿ ಇಲ್ಲ. ಒಂದು ವೇಳೆ ಅವರಂತೆ ಅವರ ವಿರುದ್ಧ, ಸಾಧಕರು ಕೂಡ ಸಿಟ್ಟು ಮಾಡುವುದು, ಟೀಕಿಸುವುದು ಹಾಗೂ ಜಗಳ ಮಾಡುವುದು ಮುಂತಾದ ಕ್ರಮಗಳನ್ನು ತೆಗೆದುಕೊಂಡರೆ ಅವರು ಸಾಧಕರಾಗಿ ಉಳಿಯುವುದಿಲ್ಲ. ಪಾರಮಾರ್ಥಿಕ ಪಥವನ್ನು ಬಿಟ್ಟು ಇಂತಹ ಕಾರ್ಯಕ್ಕೆ ಇಳಿಯಬೇಕಾಗುತ್ತದೆ. ಆದುದರಿಂದ ಸಾಧಕನು ಈ ರೀತಿಯ ಅನಿವಾರ್ಯಗಳನ್ನು ಸಹನೆಯಿಂದಲೇ ಸಹಿಸಬೇಕಾಗುತ್ತದೆ.

**ಓ.ಸಂ.138 :** ಸಾಧಕನು ಹೀಗೆ ಅನಿವಾರ್ಯವಾದುದೆಲ್ಲವನ್ನೂ ತಿಳಿದುಕೊಂಡು ಬರುವ ದುಃಖಗಳನ್ನೆಲ್ಲವನ್ನೂ ಸುಖವೆಂದೇ ಭಾವಿಸಿ ಅನುಭವಿಸುತ್ತಾನೆ. ದೇಹದ ಮೇಲಿನ ಪ್ರೀತಿಯು ಅವನಿಗೆ ಇಲ್ಲವಾದ್ದರಿಂದ ಜನರು ಮಾಡಿದ ಟೀಕೆಯನ್ನೆಲ್ಲ ಯಾವುದೇ ಕ್ರೋಧವಿಲ್ಲದೇ ಸಂತೋಷದಿಂದಲೇ ಸಹಿಸಿಕೊಳ್ಳುತ್ತಾನೆ.

**ವಿವರಣೆ :** ಈ ಓವಿಯು 'ತಿತಿಕ್ಷಾ' ದ ವಿವರಣೆಯಲ್ಲಿ ಕೊನೆಯ ಮಂತ್ರವಾಗಿದ್ದು ಇದು ಅದರ ಸಮಾರೋಪ ಮಾಡುತ್ತದೆ. ಈ ರೀತಿ ಸಮಾಜದಲ್ಲಿ ಸಾಧಕರ ಬಗ್ಗೆ ಅನೇಕ ಟೀಕೆಗಳು ಬರುವುದು ಅನಿವಾರ್ಯವೆಂದು ತಿಳಿದುಕೊಂಡು ಸಾಧಕನು ಅವುಗಳಿಂದ ಉಂಟಾಗುವ

ದುಃಖವನ್ನು ಸುಖರೂಪವೆಂದೇ ಭಾವಿಸಿ ಅವುಗಳನ್ನು ಸಂತೋಷದಿಂದಲೇ ಅನುಭವಿಸುತ್ತಾನೆ. ದೇಹವು ಅನಿವಾರ್ಯವಾದರೂ ಅದರ ಮೇಲಿನ ಪ್ರೀತಿಯು ಇಲ್ಲವಾದ್ದರಿಂದ ಹೊರಗಿನಿಂದ ಬರುವ ಟೀಕೆ ಟಿಪ್ಪಣಿಗಳನ್ನೆಲ್ಲ ಸುಲಭವಾಗಿ ಸಹಿಸಿಕೊಳ್ಳುವ ಶಕ್ತಿಯು ಅವನಲ್ಲಿರುತ್ತದೆ. ಆದುದರಿಂದ ಇತರರು ಅವನ ಮೇಲೆ ಸಿಟ್ಟು ಮಾಡಿದರೂ ತನಗೆ ಅವರ ಮೇಲೆ ಯಾವುದೇ ಕ್ರೋಧವಿಲ್ಲದೇ ಸಂತೋಷದಿಂದಲೇ ಎಲ್ಲ ಟೀಕೆ ಮತ್ತು ಅವಹೇಳನಗಳನ್ನು ಸಹಿಸಿಕೊಳ್ಳುತ್ತಾನೆ.

**ಓ.ಸಂ.139** : 'ಉಪರತಿ' ಎಂದರೆ ಸರ್ವ ಕರ್ಮಗಳನ್ನು ಅವುಗಳ ಫಲಸಹಿತವಾಗಿ ತ್ಯಾಗಮಾಡುವುದಲ್ಲದೇ ಈ ಕರ್ಮಗಳನ್ನು ಮಾಡಲು ಬೇಕಾದ ಸಹಕಾರೀ ಸಾಧನಗಳನ್ನು ತ್ಯಜಿಸುವುದು ಮತ್ತು ಸಂನ್ಯಾಸಾಶ್ರಮವನ್ನು ಸ್ವೀಕರಿಸುವುದು ಆಗಿರುತ್ತದೆ.

**ವಿವರಣೆ** : ಈ ಓವೀಯಿಂದ 'ಷಟ್ ಸಂಪತ್ತು' ಗಳ ವಿವರಣೆಯಲ್ಲಿ 'ಉಪರತಿ' ಎಂಬ ನಾಲ್ಕನೆಯದಾದ ಸಾಧನವನ್ನು ತೆಗೆದುಕೊಳ್ಳಲಾಗಿದೆ. ವಿವೇಕ, ವೈರಾಗ್ಯ, ಶಮ, ದಮಾದಿಗಳಲ್ಲಿ ಸಿದ್ಧಿಯನ್ನು ಪಡೆದವನು 'ಉಪರತಿ' ಎಂಬ ಸಾಧನವನ್ನು ಕೈಕೊಳ್ಳಲು ಸಮರ್ಥನಿರುತ್ತಾನೆ. 'ಉಪರತಿ'ಯಲ್ಲಿ ಸರ್ವ ಕರ್ಮಗಳನ್ನೂ ಅವುಗಳ ಫಲ ಸಮೇತ ತ್ಯಾಗ ಮಾಡಬೇಕಾಗುವುದು. ವ್ಯಕ್ತಿಗೆ ಸೇರಿದ ವಿಶಿಷ್ಟವಾದ ವರ್ಣಾಶ್ರಮಗಳಿಗೆ ಅನುಗುಣವಾದ ನಿತ್ಯ ನೈಮಿತ್ತಿಕ ಕಾಮ್ಯ ಹಾಗೂ ಪ್ರಾಯಶ್ಚಿತ್ತ ಕರ್ಮಗಳನ್ನೆಲ್ಲ ತ್ಯಾಗ ಮಾಡಬೇಕು. ಸಕಾಮ ಕರ್ಮಗಳಿದ್ದರೆ ಹಾಗೂ ಉಪಾಸನೆಗಳಿದ್ದರೂ ಅವುಗಳ ಸಮೇತ ತ್ಯಾಗ ಮಾಡಬೇಕಾಗುತ್ತದೆ. ಅಲ್ಲದೇ ಕರ್ಮಾಚರಣೆಗೆ ತೊಡಗಬೇಕಾದ ಅಂಗವಸ್ತ್ರಗಳು, ಚಂಡಿಕೆ, ಜನಿವಾರ ಸಮೇತ ಇನ್ನೂ ಬೇಕಾದ ಸಹಕಾರೀ ಸಾಧನಗಳನ್ನೆಲ್ಲ ತ್ಯಜಿಸಬೇಕು. ಕೆಲವೊಂದು ಕರ್ಮಗಳನ್ನು ಹೆಂಡತಿ ಇಲ್ಲದೇ ಮಾಡಲು ಬರುವುದಿಲ್ಲ. ಹಾಗೆಯೇ ಧನ, ಪುತ್ರ, ಮುಂತಾದವರ ಸಹಾಯಗಳೂ ಬೇಕಾಗುತ್ತದೆ. ಇವುಗಳಲ್ಲದೇ ಬೇಕಾಗುವ ಇತರೇ ವ್ಯಕ್ತಿ ಹಾಗೂ ವಸ್ತುಗಳು - ಈ ಎಲ್ಲ ಸಹಕಾರೀ ಸಾಧನಗಳನ್ನು ತ್ಯಜಿಸಬೇಕು ಮತ್ತು ಶಾಸ್ತ್ರೋಕ್ತವಾದ ವಿಧಿ ಪೂರ್ವಕವಾದ ಆಶ್ರಮ ಸಂನ್ಯಾಸವನ್ನು ಅಂದರೆ ವಿವಿದಿಶಾ ಸಂನ್ಯಾಸವನ್ನು

ಸ್ವೀಕರಿಸಲೇಬೇಕು. ಅಂದರೆ ಸಂನ್ಯಾಸಿಯಾಗಿ ಈ ಆಶ್ರಮದ ನಿಯಮಗಳನ್ನೆಲ್ಲ ತಪ್ಪದೇ ಪಾಲಿಸಬೇಕಾಗುತ್ತದೆ.

**ಓ.ಸಂ.140** : ಈ ಸಾಧಕನು ವಿವೇಕಿಯಾಗಿರುವುದರಿಂದ ಜಗತ್ತಿನಲ್ಲಿರುವ ವಿಷಯ ಭೋಗಗಳನ್ನು ಅನಿತ್ಯವೆಂದು ತಿಳಿಯುತ್ತಾನೆ. ಅವನು ವೈರಾಗ್ಯಶಾಲಿಯಾಗಿರುವುದರಿಂದ ಈ ಅನಿತ್ಯವಾದ ವಿಷಯ ಭೋಗಗಳ ಬಗ್ಗೆ ಜಿಗುಪ್ಸೆಯನ್ನು ತಾಳುತ್ತಾನೆ. ಹಾಗೆಯೇ ಶಮ-ದಮಾದಿ ಸಾಧನಗಳಿಂದ ತನ್ನ ಮನೋಇಂದ್ರಿಯಗಳು ವಿಷಯಗಳ ಸಂಪರ್ಕವನ್ನು ಮಾಡದಂತೆ ತಡೆಯುತ್ತಾನೆ

**ವಿವರಣೆ :** ಉಪರತನಾಗಲು ಸಾಧಕನು ಹಿಂದಿನ ಸಾಧನಗಳಲ್ಲಿ ಸಿದ್ಧಿಯನ್ನು ಪಡೆದಿರುತ್ತಾನೆ. ವಿವೇಕವು ಜಾಗ್ರತವಾಗಿರುವುದರಿಂದ ಅವನಿಗೆ ವಿಷಯ-ಭೋಗಗಳು ಅನಿತ್ಯವೆಂಬ ದೃಢಜ್ಞಾನವು ಬಂದಿರುತ್ತದೆ. ವೈರಾಗ್ಯವೂ ಕೂಡ ಅವನಿಗೆ ಸಿದ್ಧಿಯಾಗಿರುವುದರಿಂದ ಅವನಿಗೆ ಈ ವಿಷಯ ಭೋಗಗಳು ತುಚ್ಛವೂ ಹಾಗೂ ದುಃಖಕಾರಕವೂ ಆಗಿರುವುದು ಮನದಟ್ಟಾಗಿರುವುದರಿಂದ ಅವುಗಳ ಮೇಲೆ ಜಿಗುಪ್ಸೆಯು ಉಂಟಾಗಿರುತ್ತದೆ. ಹಾಗೆಯೇ ಶಮ, ದಮ, ಉಪರತಿ ಮತ್ತು ತಿತಿಕ್ಷಾಗಳು ಇವನಿಗೆ ವಶವಾಗಿರುವುದರಿಂದ ಇವನ ಎಲ್ಲ ಕರಣಗಳು ಅಂದರೆ ಮನೋಇಂದ್ರಿಯಗಳು ತಮ್ಮ ವಿಷಯಗಳ ಸಂಪರ್ಕವೇ ಆಗದಂತೆ ತಡೆಯುವ ಸಾಮರ್ಥ್ಯವನ್ನು ಹೊಂದಿರುತ್ತವೆ.

**ಓ.ಸಂ.141** ; ಇಂತಹ ಸಾಧಕನು ವಿಷಯ ಭೋಗಗಳಿಗಾಗಿ ಮೂರ್ಖರಂತೆ ತಾನೂ ಫಲದ ಆಸೆಗೆ ಕರ್ಮಗಳನ್ನು ಮಾಡಲು ಇಂದ್ರಿಯಗಳನ್ನು ತೊಡಗಿಸುವುದಿಲ್ಲ. ಏಕೆಂದರೆ ಅವನಿಗೆ ಕರ್ಮಫಲಗಳು ಅನಿತ್ಯವೆಂದು ದೃಢಜ್ಞಾನವು ಬಂದಿರುತ್ತದೆ.

**ವಿವರಣೆ** : ಹೀಗೆ ವಿರಕ್ತನಾದ ವಿವೇಕಿಯು ಶಮ, ದಮ ಮತ್ತು ತಿತಿಕ್ಷಾಗಳಲ್ಲಿ ನಿಯಂತ್ರಣ ಹೊಂದಿದ್ದು ಮೂರ್ಖ ಸಾಮಾನ್ಯ ಜನರಂತೆ ವಿಷಯ ಭೋಗಗಳಿಗಾಗಿ ಆಸೆ ಪಡುವವನಲ್ಲ. ಆದುದರಿಂದ ಫಲಕ್ಕಾಗಿ ಅವನು ಯಾವ ಕರ್ಮಗಳನ್ನೂ ಮಾಡಲು ಹೋಗುವುದಿಲ್ಲ. ಕರ್ಮಗಳನ್ನು ಮಾಡುವುದೆಂದರೆ - ಕರ್ಮಗಳನ್ನು ಮಾಡುವುದರಲ್ಲಿ ಜ್ಞಾನೇಂದ್ರಿಯ ಮತ್ತು

ಕರ್ಮೇಂದ್ರಿಯಗಳನ್ನು ತೊಡಗಿಸುವುದು ಎಂದರ್ಥ. ಆದುದರಿಂದ ಯಾವ ಫಲಾಪೇಕ್ಷೆಯೂ ಇಲ್ಲದ ಅವನಿಗೆ ಯಾವ ಕರಣಗಳೂ ( ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳ ಜೊತೆಗೆ ಅಂತಃಕರಣವೂ ಸೇರಿಕೊಂಡು ) ಬಹಿರ್ಮುಖವಾಗಿರದೇ ಅಂತರ್ಮುಖವಾಗಿರುತ್ತವೆ. ಇದಕ್ಕೆ ಮುಖ್ಯ ಕಾರಣವೇನೆಂದರೆ ಅವನಿಗೆ ಸಾಕಷ್ಟು ವಿಚಾರದಿಂದ ವಿವೇಕವು ಹುಟ್ಟಿ ದೃಢವಾಗಿದ್ದುದರಿಂದ ಅವನಿಗೆ ಕರ್ಮಫಲಗಳು ಅನಿತ್ಯವೆಂಬ ಸತ್ಯವೂ ಸ್ಪಷ್ಟವಾಗಿ ಗೋಚರವಾಗಿರುತ್ತವೆ.

**ಓ.ಸಂ.142** : ವಿವೇಕೀ ಸಾಧಕನು ಫಲ ಸಮೇತ ಸರ್ವ ಕರ್ಮಗಳ ಜೊತೆಗೆ ಅವುಗಳ ಸಾಧನವಾದ ಸ್ತ್ರೀ-ದ್ರವ್ಯಾದಿಗಳನ್ನು ತ್ಯಾಗ ಮಾಡುತ್ತಾನೆ ಮತ್ತು ತನ್ನ ಸಾಧನವನ್ನು ಮುಂದುವರಿಸುತ್ತಾನೆ.

**ವಿವರಣೆ** : ಸಾಧಕನು ಯಾವುದೇ ವರ್ಣ ಅಥವಾ ಆಶ್ರಮದವನಿದ್ದರೂ ಅವುಗಳಿಗೆ ಸಂಬಂಧಪಟ್ಟ ಶಾಸ್ತ್ರೋಕ್ತ ಕರ್ಮಗಳನ್ನು ಚಾಚೂ ತಪ್ಪದೇ ನಿಷ್ಕಾಮ ಭಾವನೆಯಿಂದ ಆಚರಿಸುತ್ತಿದ್ದ ಪರಿಣಾಮವಾಗಿ ಅವನಿಗೆ ಚಿತ್ತಶುದ್ಧಿಯು ಉದಯಿಸಿರುತ್ತದೆ. ಇದರಿಂದ ಇವನಿಗೆ ವಿವೇಕ ವೈರಾಗ್ಯಗಳು ಹಾಗೂ ಶಮ, ದಮ ಮತ್ತು ತಿತಿಕ್ಷಾಗಳು ಅವಗತವಾಗಿರುತ್ತವೆ. ಇಂತಹವನು ಉಪರತನಾಗಿರಲು ಪ್ರಯತ್ನಿಸುತ್ತಾನೆ. ಅವನು ಫಲಗಳ ಜೊತೆಗೆ ಸರ್ವ ಕರ್ಮಗಳನ್ನು ತ್ಯಾಗ ಮಾಡುತ್ತಾನೆ. ಹೋಮ ಹವನಗಳಲ್ಲಿ ದಂಪತಿಗಳು ಕೂಡಿ ಈ ಕರ್ಮಾಚರಣೆಯನ್ನು ಮಾಡುತ್ತಾರೆ. ಹಾಗೆಯೇ ಇವುಗಳಿಗೆ ಸಾಕಷ್ಟು ದ್ರವ್ಯವು ಖರ್ಚಾಗುತ್ತದೆ. ಹೆಂಡತಿ, ಪುತ್ರಾದಿಗಳು ಹೊರಗಿನಿಂದ ಸಹಾಯ ಮಾಡುತ್ತಾರೆ - ಈ ಸಹಕಾರೀ ಸಾಧನಗಳನ್ನು ಅವನು ತ್ಯಾಗ ಮಾಡುತ್ತಾನೆ. ಹಾಗೆಯೇ ಅವನ ಆಸ್ತಿ, ಜಮೀನು, ಇತ್ಯಾದಿ ಮುಂತಾದುವುಗಳನ್ನೂ ತ್ಯಾಗ ಮಾಡುತ್ತಾನೆ. ಹೀಗೆ ಕರ್ಮಗಳ ಜೊತೆಗೆ 'ನನ್ನದು' ಅನ್ನಬಹುದಾದ ಎಲ್ಲವನ್ನೂ ತ್ಯಾಗ ಮಾಡಿ ಸಂನ್ಯಾಸಿ ಆಗುತ್ತಾನೆ. ಮುಂದಿನ ಓವೀಯ ಮೊದಲೆರಡು ಚರಣಗಳನ್ನು ಇಲ್ಲಿಯೇ ವಿವರಿಸಲಾಗಿದೆ.

**ಓ.ಸಂ.143** : ಹೀಗೆ ಎಲ್ಲವನ್ನೂ ತ್ಯಾಗ ಮಾಡಿದ ಉಪರತನಿಗೆ ಹೆಂಡತಿ ಮಕ್ಕಳ ಮೋಹ ಹೋಗುವುದಿಲ್ಲ. ಅಂದಮೇಲೆ ತನ್ನ ದೇಹದ ಮೇಲಿನ ಮೋಹವು ಸುಲಭವಾಗಿ ಹೋಗುವುದಿಲ್ಲ.

**ವಿವರಣೆ :** ಈ ಓವೀಯ ಮೊದಲ ಎರಡು ಚರಣಗಳನ್ನು ಹಿಂದಿನ ಓವೀಯಲ್ಲಿಯೇ ವಿವರಿಸಲಾಗಿದೆ. ಎಲ್ಲವನ್ನೂ ಬಿಟ್ಟು ಸಂನ್ಯಾಸಿಯಾದ ಉಪರತನಿಗೆ ತನ್ನ ಪೂರ್ವಾಶ್ರಮದ ನೆನಪು ಕಾಡುತ್ತದೆ. ಹೆಂಡತಿ ಮಕ್ಕಳನ್ನು ತ್ಯಜಿಸಿದರೂ ಅವರು ಮನಸ್ಸಿನಿಂದ ದೂರ ಹೋಗುವುದಿಲ್ಲ. ಹಿಂದೆ ಇವನ ಜೊತೆಗೆ ಅವರಿಗೆ ಅನ್ಯೋನ್ಯವಾಗಿದ್ದ ಒಡನಾಟವು ಆಗಾಗ ಇವನಿಗೆ ನೆನಪಿಗೆ ಬರುತ್ತದೆ. ಅಂದರೆ ಇವನು ಅವರನ್ನು ತ್ಯಜಿಸಿದರೂ ಕೂಡ ಅವರ ಮೇಲಿರುವ ಇವನ ಮೋಹವು ಮಾತ್ರ ಇನ್ನೂ ಹೋಗಿರುವುದಿಲ್ಲ. ಹೀಗಿರುವಾಗ ಹೆಂಡತಿ ಮಕ್ಕಳಿಗಿಂತ ಹೆಚ್ಚು ಪ್ರೀತಿಸುವ ತನ್ನ ಸ್ವತಃ ದೇಹದ ಮೇಲೆ ಇನ್ನೂ ಹೆಚ್ಚು ಮೋಹವಿರುವುದು ಸ್ವಾಭಾವಿಕ. ತನ್ನ ದೇಹವನ್ನು 'ನಾನು' ಎಂದು ಕರೆಯಬಹುದು. ಆದರೆ ಹೆಂಡತಿ ಮಕ್ಕಳು ಹಾಗೂ ಉಳಿದ ಬಂಧು ಬಾಂಧವರನ್ನು 'ನನ್ನವರು' ಎಂದು ಕರೆಯಬಹುದೇ ವಿನಃ 'ನಾನು' ಎಂದು ಕರೆಯಲಾಗುವುದಿಲ್ಲ. ತನ್ನ ದೇಹವು ಕೇಂದ್ರವಾಗಿದ್ದುಕೊಂಡು ಅದರ ಪ್ರೀತಿಗಾಗಿಯೇ ಉಳಿದ ಎಲ್ಲವನ್ನೂ ವ್ಯಕ್ತಿ ಪ್ರೀತಿಸುತ್ತಾನೆ. ಆದುದರಿಂದ ಹೆಂಡತಿ ಮಕ್ಕಳು ಹಾಗೂ ತನ್ನ ದೇಹದ ಮೇಲಿನ ಮೋಹವು ಅವನಿಗೆ ಹೋಗುವುದಲ್ಲ.

**ಓ.ಸಂ.144 :** ಯಾವುದೇ ಸಾಧಕನಿಗೆ ತಾನು ಕೆಳಗಿನ ಮೆಟ್ಟಲನ್ನು ದಾಟದ ಹೊರತು (ಅಂದರೆ ಕೆಳಗಿನ ಸಾಧನಗಳನ್ನು ಸಿದ್ಧಿಸಿಕೊಳ್ಳದ ಹೊರತು) ಮೇಲಿನ ಮೆಟ್ಟಲಿಗೆ ಹೋಗಲು ಬರುವುದಿಲ್ಲ ( ಮುಂದಿನ ಸಾಧನವನ್ನು ಕೈಗೊಳ್ಳಲು ಬರುವುದಿಲ್ಲ). ಉಪರತನಿಗೆ ಇನ್ನೂ ಕರ್ಮದ ಹಂಗು ( ಅಂದರೆ ವಾಸನೆಯು ) ಹೋಗದೇ ಇರುವುದರಿಂದ ಜ್ಞಾನವು ಎಟುಕುವುದಿಲ್ಲ.

**ವಿವರಣೆ :** ಆಧ್ಯಾತ್ಮಿಕ ಸಾಧನದಲ್ಲಿ ಅನೇಕ ಹಂತಗಳಿರುತ್ತವೆ. ಕೆಳಗಿನ ಹಂತಗಳನ್ನು ದಾಟದ ಹೊರತು ಮೇಲಿನ ಹಂತಕ್ಕೆ ಹೋಗಲಾಗುವುದಿಲ್ಲ. ಇದು ಕೆಳಗಿನ ಮೆಟ್ಟಲನ್ನು ಏರದೇ ಮೇಲಿನ ಮೆಟ್ಟಲನ್ನು ಹೇಗೆ ಏರಲಾಗುವುದಿಲ್ಲವೋ ಹಾಗೆ ಇರುತ್ತದೆ. ಉಪರತನು ಎಲ್ಲವನ್ನು ತ್ಯಾಗ ಮಾಡಿದರೂ ಅವುಗಳ ವಾಸನೆಯ ಹಿಡಿತದಿಂದ ಇನ್ನೂ ತಪ್ಪಿಸಿಕೊಂಡಿರುವುದಿಲ್ಲ. ಅವನ ಯಾವ ಕರ್ಮದಿಂದ ತನ್ನ ದೇಹ ಹಾಗೂ ಹೆಂಡತಿ ಮಕ್ಕಳನ್ನು ಪಡೆದನೋ ಆ ಕರ್ಮದ ಪರಿಣಾಮವು ಕರ್ಮಗಳನ್ನು ಬಿಟ್ಟರೂ ಅವನನ್ನು ಬಿಡುವುದಿಲ್ಲ. ಇಲ್ಲಿ ಕರ್ಮದ ಪರಿಣಾಮವೇ ದೇಹಾದಿಗಳ ಮೇಲಿರುವ ವಾಸನೆಯಾಗಿದೆ. ಇದನ್ನೆಲ್ಲ ಕರ್ಮದ 'ಭಿಡೆ' ಅಥವಾ 'ಹಂಗು'

ಎಂದು ಕರೆಯಲಾಗಿದೆ. ಈ ಕರ್ಮದ ಹಂಗು ಹೋಗದ ಹೊರತು ಉಪರತನಿಗೆ ಜ್ಞಾನಪ್ರಾಪ್ತಿಯಾಗುವುದಿಲ್ಲ. ಮಾಡುವ ಕರ್ಮದ ಫಲವನ್ನು ಬಿಟ್ಟರೂ ಆ ಕರ್ಮವನ್ನು ಮಾಡುವುದರ ಚಟವು ಹೋಗುವುದಿಲ್ಲ. ಈ ಕರ್ಮದ ಭಿಡೆಯಿಂದಲೂ ಪಾರಾಗಬೇಕು.

ಓ.ಸಂ.145 : ಆದುದರಿಂದ ಎಲ್ಲವನ್ನೂ ತ್ಯಾಗ ಮಾಡಿ ಜ್ಞಾನ ಪ್ರಾಪ್ತಿಗಾಗಿ ಸದ್ಗರುವಿಗೆ ಶರಣಾಗಿ ಅವನ ಆಶ್ರಯ ಪಡೆಯಬೇಕು. ಇದೊಂದು ಅತ್ಯಂತ ಮಹತ್ವದ ಸಾಧನವಾಗಿದ್ದು ಇದನ್ನೇ 'ಉಪರತಿ' ಎಂದು ಕರೆಯುತ್ತಾರೆ.

ವಿವರಣೆ : ಸಾಧಕನು ಎಲ್ಲವನ್ನೂ ತ್ಯಾಗ ಮಾಡಿದರೂ ಅವುಗಳ ಹಾಗೂ ಕರ್ಮದ ವಾಸನೆಯಿಂದ ಮುಕ್ತನಾಗಿರುವುದಿಲ್ಲ. 'ನಾನು ದೇಹ' ಎಂಬುದರ ವಾಸನೆ ಹಾಗೂ ಹೆಂಡತಿ ಮಕ್ಕಳ ನೆನಪು ಬರುವುದು ಸಹಜವಾಗಿರುತ್ತದೆ. 'ದೇಹವೇ ನಾನು' ಎಂಬ ವಾಸನೆಯು ಎಲ್ಲ ವಾಸನೆಗಳಿಗೂ ಮೂಲವಾಗಿರುತ್ತದೆ. ಅದರ ನಿರಸನವಾದರೆ ಉಳಿದ ವಾಸನೆಗಳ ನಾಶವು ತನಗೆ ತಾನೇ ಆಗುತ್ತದೆ. ಆದುದರಿಂದ ತಾನು ಅದ್ವಯ ಬ್ರಹ್ಮನಿದ್ದಾನೆ; ತಾನು ದೇಹವಲ್ಲ; ಎಂಬುದನ್ನು ಸದ್ಗುರುವಿನ ಮೂಲಕವೇ ತಿಳಿಯಬೇಕಾಗುತ್ತದೆ. ಈ ಜ್ಞಾನವು ಉದಯಿಸಲು ತನ್ನ 'ದೇಹೋಽಹಂ' ಎಂಬ ಅಹಂಕಾರವು ಸಂಪೂರ್ಣವಾಗಿ ನಾಶವಾಗಬೇಕಾಗುತ್ತದೆ. ಅದಕ್ಕಾಗಿ ಸದ್ಗುರುವಿಗೆ ಸಂಪೂರ್ಣ ಶರಣಾಗತನಾಗುವುದಲ್ಲದೇ ಅವನ ಸೇವೆಯನ್ನು ಮಾಡಬೇಕಾಗುತ್ತದೆ. ಹೀಗೆ ಸದ್ಗುರುವಿನ ಆಶ್ರಯ ಪಡೆದು ಅವನಿಂದ ಆತ್ಮಪ್ರಾಪ್ತಿ ಮಾಡಿಕೊಳ್ಳಬೇಕು. ಹೀಗೆ ಸರ್ವತ್ಯಾಗದಿಂದ ಸಂನ್ಯಾಸ ಪಡೆದು ಉಪದೇಶಕ್ಕಾಗಿ ಸದ್ಗುರುವಿನ ಬಳಿ ಸಾರುವುದಕ್ಕೆ 'ಉಪರತಿ' ಎಂದು ಹೆಸರು. ಇದು ಅತ್ಯಂತ ಮಹತ್ವವಾದ ಸಾಧನವಾಗಿದೆ.

ಓ.ಸಂ.146 : ಈ ಷಟ್ ಸಂಪತ್ತಿನಲ್ಲಿ ಐದನೆಯದಾದ ಶ್ರದ್ಧೆಯ ವಿವರಣೆ ಹೀಗಿರುತ್ತದೆ. ಗುರುವು ಈಶ್ವರನಿಗಿಂತಲೂ ಹೆಚ್ಚು ಪೂಜ್ಯನಿದ್ದಾನೆ. ಸರ್ವಕ್ಕೂ ಅಸ್ತಿತ್ವವು ಗುರುವಿನಿಂದಲೇ ಬರುತ್ತದೆ.

ವಿವರಣೆ : ಸಾಧನ ಚತುಷ್ಟಯದಲ್ಲಿ ಮೂರನೆಯದಾದ ಷಟ್-ಸಂಪತ್ತಿನಲ್ಲಿ ಐದನೆಯದೇ 'ಶ್ರದ್ಧೆ'ಯಾಗಿರುತ್ತದೆ. ಜ್ಞಾನ ಬರುವ ಮೊದಲು ಯಾವುದು ಯಥಾರ್ಥವೋ ಅದನ್ನು ನಂಬಿ

ಅದನ್ನು ತಿಳಿಯಲು ಸರಿಯಾದ ದಾರಿಯಲ್ಲಿ ಕ್ರಮಿಸಬೇಕು. ಸರಿಯಾದ ಗುರಿಯನ್ನು ಮತ್ತು ಅದನ್ನು ತಲುಪುವ ಮಾರ್ಗವನ್ನು ತಿಳಿದಿರುವ ಸದ್ಗುರುವು ಹೇಳಿದಂತೆ ಅದನ್ನು ನಂಬಿ ಆ ರೀತಿ ನಡೆಯಬೇಕು. ಸದ್ಗುರುವನ್ನು ಹಾಗೂ ಈಶ್ವರನನ್ನು ಹೋಲಿಸಿ ನೋಡುವುದಾದರೆ ಈಶ್ವರನಿಗಿಂತ ಗುರುವು ಹೆಚ್ಚು ಪೂಜ್ಯನಿರುತ್ತಾನೆ. ಏಕೆಂದರೆ ಆತ್ಮಜ್ಞಾನವನ್ನು ಉಪದೇಶಿಸಿ ಶಿಷ್ಯನಿಗೆ ಭವರೋಗದಿಂದ ಮುಕ್ತ ಮಾಡುವ ಶಕ್ತಿಯು ಕೇವಲ ಗುರುವಿಗೆ ಮಾತ್ರ ಇರುತ್ತದೆ. ಸರ್ವಕ್ಕೂ ಅಸ್ತಿತ್ವವನ್ನು ಕೊಡುವವನು ಗುರುವೇ ಆಗಿರುತ್ತಾನೆ. ಇದು ಹೇಗೆಂಬುದನ್ನು ಮುಂದಿನ ಓವೀಯಲ್ಲಿ ವಿವರವಾಗಿ ತಿಳಿಸಲಾಗಿದೆ.

**ಓ.ಸಂ.147** : ಶಾಸ್ತ್ರವು ಹೇಳುವ ಪ್ರಕಾರ ಗುರುವು ಪರಬ್ರಹ್ಮನೇ ಆಗಿದ್ದಾನೆ. ಅವನ ಮಾತೇ ಆಗಮ-ನಿಗಮಗಳಾಗಿವೆ. ಅವನ ಮಾತಿನಿಂದ ಸರ್ವಸಿದ್ಧಿಗಳೂ ಉಂಟಾಗುತ್ತವೆ.

**ವಿವರಣೆ** : ಶಾಸ್ತ್ರವು ಗುರುವನ್ನು ಕೊಂಡಾಡುತ್ತದೆ. ಗುರುವೇ ಪರಬ್ರಹ್ಮನೆಂದು ತಿಳಿಸಿದೆ. ಅಂದರೆ ಸರ್ವದರ ಸೃಷ್ಟಿ-ಸ್ಥಿತಿ-ಲಯಗಳಿಗೆ ಗುರುವೇ ಕಾರಣನಿದ್ದಾನೆ. ಆದುದರಿಂದ ಹಿಂದಿನ ಓವೀಯಲ್ಲಿ ತಿಳಿಸಿದಂತೆ ಪ್ರತಿಯೊಂದರ ಅಸ್ತಿತ್ವದ ಮೂಲವೂ ಗುರುವೇ ಆಗಿರುತ್ತಾನೆ. ಅವನ ವಚನವು ವೇದವು ಅಂದರೆ ನಿಗಮವಾಗುತ್ತದೆ. ನಿಗಮದಿಂದ ಬಂದಿರುವುದೇ ಆಗಮವಾದ್ದರಿಂದ ಅವನ ಮಾತೇ ನಿಗಮ-ಆಗಮಗಳಾಗಿವೆ. ಅಂದರೆ ಗುರುವಿನ ಬಾಯಿಯಿಂದ ಬರುವುದೆಲ್ಲವೂ ವೇದ ವಾಕ್ಯವೇ ಆಗಿರುತ್ತದೆ. ನಮಗೆ ಉಪಲಬ್ಧವಿರುವ ನಿಗಮ-ಆಗಮ ಗ್ರಂಥಗಳು ಗುರುವಿನ ಬಾಯಿಯಿಂದಲೇ ಬಂದವುಗಳಾಗಿವೆ. ಶಿಷ್ಯನಿಗೆ ಗುರುವಿನ ಅನುಗ್ರಹವಾದಲ್ಲಿ ಸರ್ವಸಿದ್ಧಿಗಳು ಅವನಿಗೆ ಪ್ರಾಪ್ತಿಯಾಗುತ್ತವೆ.

**ಓ.ಸಂ.148** : ಮಂತ್ರವನ್ನು ಗುರು ಉಪದೇಶವಿಲ್ಲದೇ ಜಪಿಸಿದರೆ ವ್ಯರ್ಥವಾಗುತ್ತದೆ. ಮನುಷ್ಯರಿಗೆ ದೇವತ್ವದ ಪ್ರಾಪ್ತಿಯಾಗುವುದು ಗುರುವಿನ ಅನುಗ್ರಹದಿಂದ ಮಾತ್ರ ಸಾಧ್ಯ.

**ವಿವರಣೆ** : ಗುರುವು ಮಾತ್ರ ಮಂತ್ರಾರ್ಥವನ್ನು ಬೋಧಿಸಿ ಮಂತ್ರಜಪಕ್ಕೆ ಜೀವ ತುಂಬುತ್ತಾನೆ. ಗುರೋಪದೇಶವಿಲ್ಲದ ಮಂತ್ರವನ್ನು ಜಪಿಸಿದರೆ ಅದು ವ್ಯರ್ಥವೇ ಆಗುತ್ತದೆ. ಅಂದರೆ ಅದು ಯಾವ ಫಲವನ್ನು ಕೊಡಬೇಕೋ ಅದನ್ನು ಕೊಡುವುದಿಲ್ಲ. ಯಾವ ಮಂತ್ರದ ಜಪವನ್ನು

ಮಾಡಬೇಕಾದರೂ ಅದನ್ನು ಮೊದಲು ಗುರುವಿನಿಂದ ಉಪದೇಶ ಪಡೆಯುವ ರೂಢಿಯು ಈಗಲೂ ಇರುತ್ತದೆ. ಗುರುವು ಮನಸ್ಸು ಮಾಡಿದರೆ ಅವನು ಮನುಷ್ಯರನ್ನು ದೇವತ್ವಕ್ಕೆ ಏರಿಸಬಲ್ಲ. ಓ.ಸಂ.150 ರಲ್ಲಿ ರಾಮ ಮತ್ತು ಕೃಷ್ಣರು ಗುರುವಿನ ಅನುಗ್ರಹದಿಂದ ಹೇಗೆ ಅವತಾರೀ ಪುರುಷರಾದರು ಎಂಬುದನ್ನು ತಿಳಿಸಲಾಗಿದೆ.

**ಓ.ಸಂ.149** : ಯಾವುದೇ ಕ್ರಿಯೆಯನ್ನು ಪ್ರಾರಂಭಿಸುವಾಗಲೂ ಗುರುವಿನ ಒಪ್ಪಿಗೆ ಹಾಗೂ ಅವನ ಅನುಗ್ರಹವು ಬೇಕಾಗುತ್ತದೆ. ದೇವತೆಗಳೂ ಕೂಡ ತಮ್ಮ ಮೋಕ್ಷಕ್ಕಾಗಿ ಯಾವಾಗಲೂ ಗುರುಕೃಪೆಯನ್ನೇ ಅವಲಂಬಿಸಿರುತ್ತಾರೆ.

**ವಿವರಣೆ** : ಯಾವುದೇ ಕ್ರಿಯೆಯನ್ನು ಪ್ರಾರಂಭಿಸುವ ಮೊದಲು ಆ ಕ್ರಿಯೆಯ ಸ್ವರೂಪದ ಬಗ್ಗೆ ಗುರುಗಳನ್ನು ಕೇಳಿ ತಿಳಿದುಕೊಳ್ಳಬೇಕು. ಅಂದರೆ ಅಧ್ಯಾತ್ಮದೃಷ್ಟಿಯಿಂದ ಆ ಕ್ರಿಯೆಯು ಒಳ್ಳೆಯದೋ ಅಥವಾ ಕೆಟ್ಟದೋ ಅನ್ನುವ ಬಗ್ಗೆ ಗುರುಗಳಿಂದ ಕೇಳಿ ತಿಳಿದುಕೊಳ್ಳಬೇಕು. ಹೀಗೆ ಗುರುವಿನ ಉಪದೇಶವಾದ ನಂತರ ಆ ಕ್ರಿಯೆಯನ್ನು ಮಾಡಬಹುದಾದರೆ ಅದಕ್ಕೆ ಗುರುವಿನ ಒಪ್ಪಿಗೆ ಬೇಕಾಗುತ್ತದೆ. ಮತ್ತು ಗುರುವಿನ ಅನುಗ್ರಹವೂ ಇರಬೇಕಾಗುತ್ತದೆ. ಆಗ ಮಾತ್ರ ಕ್ರಿಯೆಯು ಇಚ್ಛಿತ ಫಲವನ್ನು ಕೊಡುತ್ತದೆ. ದೇವತೆಗಳು ಕೂಡ ಮೋಕ್ಷಾರ್ಥಿಯಾಗಿ ಗುರುವಿನ ಉಪದೇಶಕ್ಕಾಗಿ ಭೂಮಿಗೆ ಬಂದ ಉದಾಹರಣೆಗಳು ಪುರಾಣಗಳಲ್ಲಿ ಸಿಗುತ್ತವೆ. ಆದುದರಿಂದ ಗುರುವಿನ ಉಪದೇಶವಿಲ್ಲದೇ ಹಾಗೂ ಗುರುಕೃಪೆಯು ಸಿಗದೇ ದೇವತೆಗಳಿಗೂ ಮೋಕ್ಷವು ಸಿಗುವಂತಿಲ್ಲ.

**ಓ.ಸಂ.150** : ಶ್ರೀರಾಮ ಮತ್ತು ಕೃಷ್ಣರು ಗುರುಕೃಪೆಯಿಂದಲೇ ದೈವತ್ವವನ್ನು ಪಡೆದು ಅವತಾರೀ ಪುರುಷರಾದರು ಎಂದು ವೇದವ್ಯಾಸರ ವಚನವು ತಿಳಿಸುತ್ತದೆ.

**ವಿವರಣೆ** : ಶ್ರೀ ರಾಮಚಂದ್ರನು ಆದರ್ಶ ಪುರುಷನಾಗಿದ್ದನು. ಅವನು ಆದರ್ಶ ಪ್ರಜೆ, ಆದರ್ಶ ಮಗ, ಆದರ್ಶ ಗಂಡ, ಆದರ್ಶ ರಾಜನಾಗಿ ಭರತ ಖಂಡದ ಜನಮಾನಸದಲ್ಲಿ ಸ್ಥಿರವಾಗಿ ನೆಲೆ ನಿಂತಿರುವನು. ಅವನ ದೇವಸ್ಥಾನಗಳು ನಮ್ಮ ದೇಶದ ಉದ್ದ ಅಗಲಕ್ಕೆ ಹರಡಿಕೊಂಡಿವೆ. ಕೋಟ್ಯಾವಧಿ ಜನರಿಗೆ ಶ್ರೀ ರಾಮನು ಆರಾಧ್ಯ ದೈವವೂ, ವಿಷ್ಣುವಿನ ಅವತಾರವೂ

ಆಗಿರುತ್ತಾನೆ. ಇವನಂತೆ ಶ್ರೀ ಕೃಷ್ಣನೂ ಕೂಡ ಜನರ ಆರಾಧ್ಯ ದೈವವೇ ಆಗಿದ್ದು ಇವನೂ ಕೂಡ ವಿಷ್ಣುವಿನ ಅವತಾರವೇ ಎಂದು ಜನ ನಂಬಿದ್ದಾರೆ. ಇವನು ಅರ್ಜುನನಿಗೆ ಉಪದೇಶ ಮಾಡಿದ ಭಗವದ್ಗೀತೆಯೆಂಬ ಅಧ್ಯಾತ್ಮ ಗ್ರಂಥವು ಜಗತ್ ಪ್ರಸಿದ್ಧವಾಗಿದೆ. ಶ್ರೀ ರಾಮಚಂದ್ರನ ಗುರುಗಳು ವಿಶ್ವಾಮಿತ್ರ ಹಾಗೂ ವಸಿಷ್ಠರಾಗಿದ್ದರು. ಶ್ರೀ ಕೃಷ್ಣನಿಗೆ ಗುರುಗಳಾಗಿ ಸಾಂದೀಪನಿ ಎನ್ನುವವರಿದ್ದರು. ಈ ಗುರುಗಳ ಅನುಗ್ರಹದಿಂದಲೇ ಶ್ರೀ ರಾಮ-ಕೃಷ್ಣರು ದೈವತ್ವವನ್ನು ಪಡೆದು ಅವತಾರೀ ಪುರುಷರಾದರು ಎಂದು ವ್ಯಾಸರ ವಚನವಿರುತ್ತದೆ.

**ಓ.ಸಂ.151 :** ಚಕೋರ ಪಕ್ಷಿಗಳಿಗೆ ಚಂದ್ರನು ಹೇಗೋ ಹಾಗೆ ಮುಮುಕ್ಷುಗಳಿಗೆ ಕರುಣಾಸಿಂಧುವಾದ ಗುರುವು ಇದ್ದಾನೆ. 'ಜೀವ'ರನ್ನು ಉದ್ಧರಿಸಲು ಅವರಿಗೆ ಆತ್ಮಜ್ಞಾನವನ್ನು ಬೋಧಿಸುತ್ತಾನೆ. ಗುರುವಿಗೆ ಯಾವುದೇ ರೀತಿಯ ಸ್ವಾರ್ಥವಿರುವುದಿಲ್ಲ.

**ವಿವರಣೆ :** ಗುರುವಿನ ಕರುಣೆಯ ಇತಿ-ಮಿತಿಗಳನ್ನು ವರ್ಣಿಸುವುದು ಸಾಧ್ಯವಿಲ್ಲ. ಅವನನ್ನು ಕರುಣಾಸಿಂಧು ಎಂದು ಹೇಳುತ್ತಾರೆ. ಅಂದರೆ ತನ್ನ ಶಿಷ್ಯನು ಯಾವುದೇ ಮಟ್ಟದವನಾಗಿರಲೀ ಅವನನ್ನು ಒಂದೊಂದೇ ಹೆಜ್ಜೆಯನ್ನಿಡಿಸುತ್ತಾ ಕೈ ಹಿಡಿದು ನಡೆಸುತ್ತಾನೆ. ಅವನನ್ನು ಕೊನೆಯ ಮೆಟ್ಟಿಲವರೆಗೆ (ಮೋಕ್ಷದ ಬಾಗಿಲಿಗೆ) ತಂದು ನಿಲ್ಲಿಸುತ್ತಾನೆ. ಚಕೋರ ಪಕ್ಷಿಗಳು ಚಂದ್ರನಿಗಾಗಿ ಕಾಯುವಂತೆ ಮುಮುಕ್ಷುಗಳು ಗುರುವನ್ನು ಕಾಯುತ್ತಾರೆ. ಅವರಿಗೆ ಪರತತ್ತ್ವವನ್ನು ಬೋಧಿಸಿ ಉದ್ಧರಿಸುತ್ತಾನೆ. ಶಿಷ್ಯನ ಅಹಂಕಾರ-ನಾಶಕ್ಕಾಗಿ, 'ಶಿಷ್ಯನು ಗುರುವಿಗೆ ಸಂಪೂರ್ಣವಾಗಿ ಶರಣಾಗಬೇಕು' ಎಂದು ಗುರುವು ಅಪೇಕ್ಷೆಪಡುತ್ತಾನೆ. ಹೀಗೆ ಶರಣಾದವನಿಗೆ ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಬೋಧಿಸುತ್ತಾನೆ. ಗುರುವು ಸಂಪೂರ್ಣವಾಗಿ ನಿಸ್ವಾರ್ಥಿಯಾಗಿರುತ್ತಾನೆ. ಅವನಿಗೆ ಯಾವುದೇ ರೀತಿಯ ಸ್ವಹಿತದ ಆಕಾಂಕ್ಷೆ ಇರುವುದಿಲ್ಲ. ಗುರುವು ತನ್ನ ಶಿಷ್ಯರನ್ನು ತನ್ನ ಮಕ್ಕಳಂತೆ ನೋಡಿ ಅವರ ಅಧ್ಯಾತ್ಮ ಏಳಿಗೆಗೆ ತಾನು ಮೊದಲಿನಿಂದ ಕೊನೆಯವರೆಗೂ ಶ್ರಮಿಸುತ್ತಾನೆ. ಅವರಿಗೆ ಆತ್ಮಜ್ಞಾನವನ್ನು ಬೋಧಿಸುತ್ತಾನೆ.

**ಓ.ಸಂ.152 :** ಶಿಷ್ಯನಿಗೆ ಯಾವುದೇ ಹಿತಕ್ಕಿಂತ ತನ್ನ ಗುರುವಿನ ಹಿತವೇ ಅತ್ಯಂತ ಹೆಚ್ಚಿನದಾಗಿರುತ್ತದೆ. ಸಕಲ ದೇವತೆಗಳೂ ಗುರುವಿಗೆ ಅಧೀನರಾಗಿರುತ್ತಾರೆ. ಸದ್ಗುರುವಿನ ದರ್ಶನದಿಂದ ಸಕಲ ಪಾಪಗಳೂ ಭಸ್ಮವಾಗುತ್ತವೆ.

**ವಿವರಣೆ :** ತಂದೆ ತಾಯಿಯರು ತಮ್ಮ ಮಗನ ಹಿತವನ್ನು ಕಾಯುತ್ತಾರೆ. ಅವನಿಗೆ ಬೇಕಾದ್ದನ್ನು ಕೊಟ್ಟು ಅವನು ಆರೋಗ್ಯದಿಂದ ಬೆಳೆಯುವಂತೆ ಮಾಡುತ್ತಾರೆ. ಅವನ ಹಿತವನ್ನು ಅವನ ಸ್ನೇಹಿತರೂ ಹಾಗೂ ಬಂಧು ಬಳಗವು ಸ್ವಲ್ಪ ಮಟ್ಟಿಗೆ ನೋಡಿಕೊಳ್ಳಬಹುದು. ಆದರೆ ಗುರುವು ಮಾತ್ರ ಅವನಿಗೆ ಈ ಎಲ್ಲ ಹಿತಗಳ ಜೊತೆಗೆ ಸರಿಯಾದದ್ದನ್ನು ಬೋಧಿಸಿ ದೈವತ್ವವನ್ನು ತಂದು ಕೊಡುತ್ತಾನೆ. ಗುರುವು ಪರಬ್ರಹ್ಮಸ್ವರೂಪನೇ ಇರುವುದರಿಂದ ಸಕಲ ದೇವತೆಗಳೂ ಇವನ ಅಧೀನದಲ್ಲಿ, ಇವನು ಹೇಳಿದವರಿಗೆ ಅವರು ಅನುಗ್ರಹ ಮಾಡುತ್ತಾರೆ. ಸದ್ಗುರುವಿನ ದರ್ಶನ ಭಾಗ್ಯವು ಪುಣ್ಯವಂತರಿಗೆ ಮಾತ್ರ ಲಭಿಸುತ್ತದೆ. ಅವನ ದರ್ಶನದಿಂದ ಹಿಂದೆ ಮಾಡಿದ ಸಕಲ ಪಾಪಗಳೂ ಭಸ್ಮವಾಗುತ್ತವೆ. ಅವನ ಸತ್ಸಂಗದಲ್ಲಿ ಪುನಃ ಪಾಪವು ಘಟಿಸುವುದಿಲ್ಲ.

**ಓ.ಸಂ.153 :** ದೀರ್ಘವಾಗಿ ನಿರ್ಮಲ ಮನಸ್ಸಿನಿಂದ ದೇವರನ್ನು ಭಜಿಸಿದರೆ ಪಾಪನಾಶವಾಗಬಹುದೇ ಹೊರತು ಆತ್ಮಜ್ಞಾನವಾಗುವುದಿಲ್ಲ.

**ವಿವರಣೆ :** ಒಬ್ಬನು ಬಹಳ ದಿವಸಗಳ ಕಾಲ ದೇವರನ್ನು ಅನನ್ಯ ಭಕ್ತಿಯಿಂದ ಧ್ಯಾನಿಸಿದರೆ ಆಗ ಅವನ ಪಾಪರಾಶಿಯು ನಾಶವಾಗಬಹುದು. ಅಲ್ಲದೇ ಅವನಿಗೆ ಕೇಳಿದ ವರವನ್ನು ದೇವರು ದಯಪಾಲಿಸಬಹುದು. ಆದರೆ ಇಷ್ಟು ಸಾಧಿಸುವುದೂ ಕೂಡ ಅತ್ಯಂತ ಕಠಿಣವಾಗಿರುತ್ತದೆ. ಸಾಮಾನ್ಯ ಮನುಷ್ಯರಿಗೆ ಇದು ಆಗುವ ಕೆಲಸವಲ್ಲ. ಆದರೆ ಅಂತಹವರು ಹಿಂದಿನ ಕಾಲದಲ್ಲಿ ನಿರ್ಮಲ ಮನಸ್ಸಿನಿಂದ ಎಷ್ಟೋ ವರ್ಷಗಳ ಪರ್ಯಂತ ತಪಸ್ಸು ಮಾಡಿ ತಮಗೆ ಬೇಕಾದ ವರವನ್ನು ಪಡೆಯುತ್ತಿದ್ದರು. ಚಿತ್ತಶುದ್ಧಿಯಿಂದ ನಿಷ್ಕಾಮವಾಗಿ ಧ್ಯಾನಿಸಿದರೆ ಮಾತ್ರ ಕೇವಲ ಪಾಪಗಳು ಭಸ್ಮವಾಗುತ್ತದೆ. ಆದರೆ ಯಾವ ದೇವರೂ ತನ್ನ ಭಕ್ತನಿಗೆ ಆತ್ಮಜ್ಞಾನವನ್ನು ದಯಪಾಲಿಸುವುದಿಲ್ಲ. ದೇವತೆಗಳಿಗೂ ಈ ಆತ್ಮಜ್ಞಾನವು ದುರ್ಲಭವಾಗಿದ್ದು ಅದನ್ನು ಪಡೆಯಲು ಅವರು ಸದ್ಗುರುವಿನ ಬಳಿಗೇ ಹೋಗಬೇಕಾಗುತ್ತದೆ.

**ಓ.ಸಂ.154 :** ಗುರುಸೇವೆಯಿಂದ ಪಾಪವು ಕ್ಷಯವಾಗುವುದಲ್ಲದೇ ಆತ್ಮಜ್ಞಾನವೂ ಪ್ರಾಪ್ತವಾಗುತ್ತದೆ. ಹೀಗೆ ಭವ-ಬಂಧನವು ಶಿಷ್ಯನಿಗೆ ತೊಲಗಿಹೋಗಿ ಸ್ವಯಂ ಬ್ರಹ್ಮವೇ ತಾನಾಗುತ್ತಾನೆ.

**ವಿವರಣೆ** : ಹಿಂದಿನ ಓವೀಯಲ್ಲಿ ದೇವರನ್ನು ನಿಷ್ಕಾಮವಾಗಿ ಭಜಿಸಿದರೆ ಪಾಪಕ್ಷಯವಾಗಬಹುದೇ ವಿನಃ ಆತ್ಮಜ್ಞಾನವು ಪ್ರಾಪ್ತವಾಗುವುದಿಲ್ಲವೆಂದು ತಿಳಿಸಲಾಗಿದೆ. ಆದರೆ ಈ ಓವೀಯಲ್ಲಿ ಗುರುಸೇವೆಯಿಂದ ಶಿಷ್ಯನಿಗೆ ಈ ಎರಡೂ ಅಂದರೆ ಪಾಪಕ್ಷಯವೂ ಮತ್ತು ಆತ್ಮಜ್ಞಾನವೂ ಲಭ್ಯವಾಗುತ್ತವೆ ಎಂದು ತಿಳಿಸಲಾಗಿದೆ. ಆದರೆ ಈ ಎರಡೂ ಏಕಕಾಲಕ್ಕೆ ಪ್ರಾಪ್ತವಾಗುವುದಿಲ್ಲ. ಗುರುಸೇವೆಯಿಂದ ಅಹಂಕಾರವು ಪೂರ್ಣ ನಾಶವಾದ ಮೇಲೆ ಸಂಚಿತ ಪಾಪವು ಕ್ಷಯವಾಗುತ್ತದೆ. ನಂತರ ಒಂದೊಂದೇ ಸಾಧನ ಚತುಷ್ಟಯಗಳು ತೋರತೊಡಗುತ್ತವೆ. ಇದೇ ಚಿತ್ತಶುದ್ಧಿಯಾಗಿರುತ್ತದೆ. ನಂತರ ಗುರುಮುಖೇನ ಅಂತರಂಗ ಸಾಧನಗಳಾದ ಶ್ರವಣ, ಮನನ ಹಾಗೂ ನಿದಿಧ್ಯಾಸನಗಳಿಂದ ಬ್ರಹ್ಮಾತ್ಮೈಕ್ಯ ಜ್ಞಾನವು ಪ್ರಾಪ್ತವಾಗುತ್ತದೆ. ಈ ಜ್ಞಾನವು ಅನಾದಿ ಅವಿದ್ಯೆಯನ್ನು ನಾಶ ಮಾಡುವುದರಿಂದ ಶಿಷ್ಯನ ಜೀವತ್ವವು ಕೊನೆಗೊಂಡು ಅವನಿಗೆ ಬ್ರಹ್ಮತ್ವವು ಪ್ರಾಪ್ತವಾಗುತ್ತದೆ.

**ಓ.ಸಂ.155** : ಆದುದರಿಂದ ಗುರುವು ದೊಡ್ಡವರಿಗಿಂತ ದೊಡ್ಡವನಾಗಿದ್ದಾನೆ. ಗುರುವು ಆತ್ಮನಿಗಿಂತ ಹೆಚ್ಚು ಹಿತಕರನು. ಏಕೆಂದರೆ ಬ್ರಹ್ಮತ್ವವನ್ನು ಕಳೆದುಕೊಂಡ ಶಿಷ್ಯನಿಗೆ ಪುನಃ ಬ್ರಹ್ಮತ್ವವನ್ನು ಗುರುವು ಕೊಡುತ್ತಾನೆ.

**ವಿವರಣೆ** : 'ಗುರು' ಎಂಬ ಪದವು 'ದೊಡ್ಡದು' ಎಂಬ ಅರ್ಥವನ್ನು ಕೊಡುತ್ತದೆ. ಗ್ರಹಗಳಲ್ಲೆಲ್ಲ ದೊಡ್ಡ ಗ್ರಹಕ್ಕೇ 'ಗುರುಗ್ರಹ' ಎಂದು ಕರೆಯಲಾಗಿದೆ. ಎಲ್ಲದರ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವ ಪರಮಾತ್ಮನು ಅತ್ಯಂತ ದೊಡ್ಡವನೆಂಬುದು ಜನಸಾಮಾನ್ಯರ ಕಲ್ಪನೆಯಾಗಿರುತ್ತದೆ. ಈಗಾಗಲೇ ಪರಮಾತ್ಮನ ಇತಿಮಿತಿಗಳನ್ನು ತಿಳಿಸಿ ಅವನಿಗಿಂತ ಗುರುವೇ ದೊಡ್ಡವನೆಂದು ತಿಳಿಸಿಯಾಗಿದೆ. ಹೀಗಾಗಿ ಅವನು ಯಾವುದು ದೊಡ್ಡದೋ ಅದಕ್ಕಿಂತ ದೊಡ್ಡವನಾಗಿದ್ದಾನೆ. ಹಾಗೆಯೇ ಗುರುವು ಆತ್ಮನಿಗಿಂತ ಹೆಚ್ಚು ಹಿತಕರನು ಎಂದು ಈ ಓವೀ ಹೇಳುತ್ತದೆ. ಆದರೆ ಆತ್ಮನನ್ನು "ಕಾಮಾಯ ಸರ್ವಂ ಪ್ರಿಯಂ ಭವತಿ" ( ಬೃ.ಉ.2.4.5. ) ಎಂದು ಬೃಹದಾರಣ್ಯಕ ಶ್ರುತಿ ಹೇಳುತ್ತದೆ. ಅಂದರೆ ಆತ್ಮನು ಅತ್ಯಂತ ಪ್ರಿಯನಾಗಿದ್ದು ಅವನಿಗೋಸ್ಕರ ಉಳಿದೆಲ್ಲವೂ ಪ್ರಿಯವಾಗಿರುತ್ತದೆ. ಪ್ರಿಯವಾಗಿರುವುದೆಲ್ಲವೂ ಹಿತಕರವಾಗಿಯೂ ಇರುತ್ತದೆ. ಆದುದರಿಂದ ಆತ್ಮನು ಅತ್ಯಂತ ಪ್ರಿಯನೂ ಮತ್ತು ಹಿತಕರನೂ ಆಗಿರುತ್ತಾನೆ ಎನಿಸುತ್ತದೆ. ಆದರೆ ಇಲ್ಲಿ ಗುರುವು ಶಿಷ್ಯನು ಕಳೆದುಕೊಂಡ ತನ್ನ ಬ್ರಹ್ಮತ್ವವನ್ನು

ಪುನಃ ಅವನಿಗೆ ಪ್ರಾಪ್ತ ಮಾಡಿಕೊಡುವುದರಿಂದ ಆತ್ಮನಿಗಿಂತ ಗುರುವು ಹೆಚ್ಚು ಹಿತಕರನು ಎಂದು ಹೇಳಲಾಗಿದೆ. ಗುರುವು ಇಲ್ಲದೇ ಯಾರೂ ಆತ್ಮಜ್ಞಾನವನ್ನು ಪಡೆಯಲಾರರು ಎನ್ನುವುದು ಸತ್ಯವೇ ಇರುತ್ತದೆ.

**ಓ.ಸಂ.156** : ಯಾವ ಆತ್ಮ ಸುಖಕ್ಕಾಗಿ ಉಳಿದ ಎಲ್ಲ ಸುಖಗಳಿರುತ್ತವೆಯೋ ಅಂತಹ ಆತ್ಮ ಸುಖವನ್ನು ಪಡೆಯುವುದಕ್ಕಾಗಿ ಆತ್ಮದರ್ಶನ ಮಾಡಿಸುವವನೇ ಗುರುವಾಗಿದ್ದಾನೆ. ಗುರುವಿನ ಅನುಗ್ರಹವಾದಲ್ಲಿ ಶಿಷ್ಯನು ಅಮೃತತ್ತ್ವವನ್ನು ಪಡೆಯುವುದರಿಂದ ಕಾಲಾತೀತನಾಗುತ್ತಾನೆ.

**ವಿವರಣೆ** : ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳು ನಾಲ್ಕು ಪುರುಷಾರ್ಥಗಳಾಗಿವೆ. ಅರ್ಥ ಮತ್ತು ಕಾಮಗಳು ಲೌಕಿಕ ಪುರುಷಾರ್ಥಗಳಾಗಿವೆ. ಅವು ಮನುಷ್ಯನಿಗೆ ಅನಿತ್ಯ ಸುಖಗಳನ್ನು ಕೊಡುವವುಗಳಾದರೂ ಕೂಡ ದೇಹವೇ ನಾನೆಂದು ತಿಳಿದಿರುವ ಅವನಿಗೆ ಅವು ಅನಿವಾರ್ಯವಾಗಿವೆ. ಶಾಸ್ತ್ರೋಕ್ತ ಕರ್ಮಗಳನ್ನು ಮಾಡುವುದರಿಂದ ಧರ್ಮವೆಂಬ ಪುರುಷಾರ್ಥವು ಕೈಗೂಡಿ ದೇಹಾಂತರದಲ್ಲಿಯೂ ಕೂಡ ಅನಿತ್ಯವೇ ಆದರೂ ಹೆಚ್ಚು ಸುಖವನ್ನು ಕೊಡುತ್ತದೆ. ಧರ್ಮ, ಅರ್ಥ ಮತ್ತು ಕಾಮಗಳು ಪರಮ ಪುರುಷಾರ್ಥವಾದ ಮೋಕ್ಷವನ್ನು ಪಡೆಯಲು ಸಹಕಾರಿಯಾಗಿವೆ. ಆತ್ಮಜ್ಞಾನದಿಂದ ಸಿಗುವ ಮೋಕ್ಷವು ನಿತ್ಯ ಸುಖವನ್ನು ಕೊಡುತ್ತದೆ. ಈ ಆತ್ಮಜ್ಞಾನವನ್ನು ಗುರುವೇ ಶಿಷ್ಯನಿಗೆ ದಯಪಾಲಿಸುತ್ತಾನೆ. ಹೀಗೆ ಶಿಷ್ಯನಿಗೆ ಆತ್ಮದರ್ಶನವನ್ನು ಮಾಡಿಸುವ ಗುರುವು ಶಿಷ್ಯನನ್ನು ಭವಬಂಧನದಿಂದ ಪಾರುಮಾಡಿಸುತ್ತಾನೆ ಮತ್ತು ಶಾಶ್ವತವಾದ ಅಮೃತತತ್ತ್ವವನ್ನು ಅಂದರೆ ಅಮಿತ ಆನಂದ ಸ್ವರೂಪವೇ ತಾನಾಗುವಂತೆ ಶಿಷ್ಯನನ್ನು ಮಾಡಿ ಅವನನ್ನು ಕಾಲದ ದವಡೆಯಿಂದ ಪಾರುಮಾಡುತ್ತಾನೆ ಅಂದರೆ ಕಾಲಾತೀತನನ್ನಾಗಿ ಮಾಡುತ್ತಾನೆ.

**ಓ.ಸಂ.157** ; ಗುರುವಿನ ಅನುಭವ ವಾಕ್ಯವನ್ನೇ ವೇದ ಪಂಡಿತರು ಪ್ರಮಾಣವೆಂದು ತಿಳಿಯುವುದರಿಂದ ಗುರು ವಾಕ್ಯವನ್ನೇ ಪ್ರಮಾಣವೆಂದು ತೆಗೆದುಕೊಳ್ಳುವುದೇ 'ಶ್ರದ್ಧೆ' ಎನಿಸಿಕೊಳ್ಳುತ್ತದೆ.

**ವಿವರಣೆ** : ಈ ಓವೀಯು 'ಶ್ರದ್ಧೆ'ಯ ವಿವರಣೆಯನ್ನು ಸಮಾರೋಪ ಮಾಡುತ್ತದೆ. ಇದು 'ಶ್ರದ್ಧೆ'ಯ ವ್ಯಾಖ್ಯೆಯನ್ನೂ ಕೊಡುತ್ತದೆ. ಶ್ರುತಿ, ಯುಕ್ತಿ ಮತ್ತು ಅನುಭೂತಿ ಎಂಬ ಮೂರು

ಪ್ರಮಾಣಗಳಲ್ಲಿ ಮೂರನೆಯದಾದ 'ಅನುಭವ' ಪ್ರಮಾಣಕ್ಕೇ ಹೆಚ್ಚಿನ ಬೆಲೆ ಇರುತ್ತದೆ. ಸದ್ಗುರು ತನ್ನ ಅನುಭವಾಮೃತವನ್ನು ಶಿಷ್ಯರ ಮೂಲಕ ಜಗತ್ತಿಗೆ ಸಾರುತ್ತಾನೆ. ವಿದ್ವಜ್ಜನರು ಈ ಗುರುವಾಕ್ಯವನ್ನೇ ಶ್ರೇಷ್ಠ ಪ್ರಮಾಣವೆಂದು ತೆಗೆದುಕೊಳ್ಳುತ್ತಾರೆ. ಗುರುವು ಶ್ರೋತ್ರೀಯನೂ ಹಾಗೂ ಬ್ರಹ್ಮನಿಷ್ಠನೂ ಆಗಿರಬೇಕು. ಅಂದರೆ ಗುರುವಾದವನು ಎಲ್ಲ ಶ್ರುತಿಯ ಜ್ಞಾನವನ್ನು ಹೊಂದಿರುತ್ತಾನೆ ಮತ್ತು ಬ್ರಹ್ಮನಿಗಾಗಿಯೇ ಅವನ ಬದುಕು ಇರಬೇಕಾಗುತ್ತದೆ. ಅವನಿಗಾದ ಅನುಭವವು ಶ್ರುತಿ ವಾಕ್ಯಕ್ಕೆ ಅನುಗುಣವಾಗಿದ್ದರೆ ಮಾತ್ರ ಅದು ಯಥಾರ್ಥವೂ ಹಾಗೂ ಪ್ರಾಮಾಣ್ಯವನ್ನು ಹೊಂದಿರುವುದೂ ಆಗುವುದು. ಗುರುವು ಸದಾ ಅನುಭವಯುಕ್ತವಾದ ಶ್ರುತಿಯನ್ನೇ ಶಿಷ್ಯರಿಗೆ ಬೋಧಿಸುತ್ತಾನೆ. ಆದುದರಿಂದ ಗುರುವಾಕ್ಯವನ್ನೇ ಪ್ರಮಾಣವೆಂದು ನಂಬುವುದು ಶಿಷ್ಯನಿಗೆ ಆವಶ್ಯಕವಾಗಿರುವ 'ಶ್ರದ್ಧೆ' ಯಾಗಿರುತ್ತದೆ.

**ಓ.ಸಂ.158** : 'ಸಮಾಧಾನ' ದ ಲಕ್ಷಣಗಳು ಹೀಗಿವೆ. ಸಮಾಧಾನವು ಶ್ರವಣಕ್ಕೆ ಮುಖ್ಯ ಸಾಧನವಾಗಿದ್ದು, ಇದಿಲ್ಲದೇ ಶ್ರವಣವು ಸರಿಯಾಗಿ ಆಗಲು ಸಾಧ್ಯವಿಲ್ಲ; ಅದು ವ್ಯರ್ಥವಾದಂತೆ.

**ವಿವರಣೆ** : ಈ ಓವೀಯಿಂದ ಸಾಧನ-ಚತುಷ್ಟಯದಲ್ಲಿ ಮೂರನೆಯದಾದ ಹಾಗೂ ಷಟ್-ಸಂಪತ್ತಿನಲ್ಲಿ ಕೊನೆಯದಾದ 'ಸಮಾಧಾನ' ವು ಪ್ರಾರಂಭವಾಗುತ್ತದೆ. ಗುರುಗಳು ಸಮಾಧಾನದ ಲಕ್ಷಣಗಳನ್ನು ಶಿಷ್ಯನಿಗೆ ತಿಳಿಸುತ್ತಾರೆ. ವೇದಾಂತ ಶ್ರವಣವನ್ನು ಕೇಳುವವರು 'ಸಮಾಧಾನ' ವನ್ನು ಹೊಂದಿರದಿದ್ದರೆ ತಾವು ಕೇಳಿದ ಶ್ರವಣವು ಅರ್ಥವೇ ಆಗುವುದಿಲ್ಲ ಮತ್ತು ಅಂತಹ ಶ್ರವಣವು ಕೇಳುವವವನಿಗೆ ವ್ಯರ್ಥವೇ ಆಗುತ್ತದೆ. ಕೇಳುವವನು ರಾಗ-ದ್ವೇಷಗಳಿಗೆ ಒಳಗಾಗಿದ್ದರೆ ಅಥವಾ ಭಾವೋನ್ಮಾದಗಳಿಂದ ಕೂಡಿದ್ದರೆ ಆಗ ಶ್ರವಣವನ್ನು ಹೇಳುವವರ ಕಡೆಗೆ ಅವನ ವ್ಯವಧಾನವನ್ನು ಇಡುವುದು ಕಷ್ಟವಾಗುತ್ತದೆ. ಯಾವ ಯೋಚನೆಯೂ ಇಲ್ಲದೇ 'ಸಮಾಧಾನ' ದಿಂದ ಕೇಳಿದ ಶ್ರವಣವು ಮಾತ್ರ ಅರ್ಥವಾಗುವುದಂತಹುದು ಆಗಿರುತ್ತದೆ. ಆದುದರಿಂದ 'ಸಮಾಧಾನ'ವು ಶ್ರವಣಕ್ಕೆ ಮುಖ್ಯ ಸಾಧನವಾಗಿರುತ್ತದೆ.

**ಓ.ಸಂ.159** : ಚಿತ್ತದ ಚಾಂಚಲ್ಯವಿಲ್ಲದೇ ಏಕಾಗ್ರತೆಯಿಂದ ವೇದಾಂತ ಶ್ರವಣ ಮಾಡುತ್ತಿರಬೇಕು. ಪಂಡಿತರು ಅದಕ್ಕೇ 'ಸಮಾಧಾನ'ವೆಂದು ಹೇಳುತ್ತಾರೆ.

**ವಿವರಣೆ :** ಯಾವುದೇ ವಿಷಯ ಗ್ರಹಿಸುವಾಗಲೂ ಮನಸ್ಸಿನ ಏಕಾಗ್ರತೆಯು ಮಹತ್ವವಾಗಿದೆ. ಏಕಾಗ್ರತೆಯೆಂದರೆ ಯಾವ ವಿಷಯವನ್ನು ಗ್ರಹಿಸಬೇಕಾಗಿದೆಯೋ ಆ ವಿಷಯದ ಬಗ್ಗೆಯೇ ಗಮನವಿದ್ದು ಬೇರೆ ವಿಷಯಗಳ ಕುರಿತು ಮನಸ್ಸನ್ನು ಹರಿಸಬಾರದು. ಆದುದರಿಂದ ಏಕಾಗ್ರತೆಯು ಸಾಧ್ಯವಾಗಬೇಕಾದರೆ ಮನಸ್ಸನ್ನು ಬೇರೆ ವಿಷಯಗಳಲ್ಲಿ ಗಮನಹರಿಸಬಾರದು. ಅಂದರೆ ಮನಸ್ಸಿಗೆ ಚಾಂಚಲ್ಯ ಇರಬಾರದು. ಇದಕ್ಕೇ 'ಸಮಾಧಾನ' ವೆನ್ನುತ್ತಾರೆ. 'ಸಮಾಧಾನ' ವೆನ್ನುವುದು 'ಸ್ಥಿತಧೀಃ' ಎಂಬ ಪದಕ್ಕೆ ಸಮಾನವಾಗಿದೆ. 'ಸ್ಥಿತಧೀಃ' ಎಂದರೆ ಬುದ್ಧಿಯು ಸ್ಥಿರವಾಗಿರುವುದು, ಅಂದರೆ ಆ ಕಡೆ ಈ ಕಡೆ ಹೊಯ್ದಾಡದೇ ಸಮನಾಗಿರುವುದು. ಸಮಾಧಾನವೆಂದರೂ ಇದೇ ಅರ್ಥವಿರುತ್ತದೆ. ಸುಖ ದುಃಖಗಳು ಬಂದರೂ ಮನಸ್ಸು ಹೊಯ್ದಾಡದೇ ಸಮತ್ವವನ್ನು ಕಾಯ್ದುಕೊಳ್ಳಬೇಕು. ಮನಸ್ಸಿನ ಈ ಸಮಾಧಾನ ಸ್ಥಿತಿಯು ವೇದಾಂತ ಶ್ರವಣ ಕೇಳುವಾಗ ಇದ್ದರೆ ಮಾತ್ರ ವೇದಾಂತವು ಅರ್ಥವಾಗುತ್ತದೆ.

**ಓ.ಸಂ.160 :** ಚಿತ್ತದಲ್ಲಿ 'ಸಮಾಧಾನ' ವು ಇರದಿದ್ದರೆ ಆಗ ವೇದಾಂತ ಶ್ರವಣವು ಮನಸ್ಸಿಗೆ ನಾಟುವುದಿಲ್ಲ. ಆದುದರಿಂದ ವೇದಾಂತ ವಿಷಯವು ಬಹಳ ಕ್ಲಿಷ್ಟಕರವೂ ಹಾಗೂ ಸೂಕ್ಷ್ಮವೂ ಆಗಿರುತ್ತದೆ.

**ವಿವರಣೆ :** ಯಾವುದೇ ವಿಷಯವನ್ನು ಅರ್ಥಮಾಡಿಕೊಳ್ಳಲು ಸಮಾಧಾನದಿಂದ ಕೇಳಬೇಕಾಗುತ್ತದೆ. ಅದರಲ್ಲೂ ವೇದಾಂತ ವಿಷಯಗಳು ಅತ್ಯಂತ ಸೂಕ್ಷ್ಮವೂ ಹಾಗೂ ಕ್ಲಿಷ್ಟಕರವೂ ಆಗಿರುವುದರಿಂದ ಅದರ ಶ್ರವಣ ಮಾಡುವಾಗ ಚಿತ್ತದ ಚಾಂಚಲ್ಯವಿಲ್ಲದೇ ಸಮಾಧಾನದಿಂದ ಕೇಳದಿದ್ದರೆ ಅದು ಅರ್ಥವಾಗುವುದೇ ಇಲ್ಲ. ವೇದಾಂತಕ್ಕೂ ಹಾಗೂ ಉಳಿದ ಶಾಸ್ತ್ರಗಳಿಗೂ ಭೇದವಿರುತ್ತದೆ. ಉಳಿದ ಶಾಸ್ತ್ರಗಳು ನಮ್ಮ ಇಂದ್ರಿಯಾನುಭವದಿಂದ ತಿಳಿಯಲ್ಪಟ್ಟ ವಿಷಯಗಳ ಬಗ್ಗೆ ಅಭ್ಯಾಸ ಮಾಡುತ್ತವೆ. ಆದರೆ ವೇದಾಂತವು ನಮ್ಮ ಅನುಭವವನ್ನೇ ವಿಶ್ಲೇಷಿಸುತ್ತವೆ. ಅಲ್ಲದೇ ನಮ್ಮ ಈ ಎಲ್ಲ ಅನುಭವಗಳ ಹಿಂದೆ ಇರುವ ಮತ್ತು ಅವುಗಳಿಗೆ ಆಧಾರವಾಗಿರುವ ನಮ್ಮ ಆತ್ಮನ ಬಗ್ಗೆ ಅದು ಅಭ್ಯಾಸ ಮಾಡುತ್ತದೆ. ಇದು ಎಲ್ಲರ ಅನುಭವದಲ್ಲಿದ್ದರೂ ಕೂಡ ಇದನ್ನು ಅರ್ಥಮಾಡಿಕೊಳ್ಳಲು ಅಂತರ್ಮುಖತೆಯು ಬೇಕಾಗಿದ್ದು ಇದು ಅತ್ಯಂತ ಸೂಕ್ಷ್ಮವಾಗಿರುತ್ತದೆ. ಇದು ಸೂಕ್ಷ್ಮವಾಗಿರುವುದರಿಂದ ಅತ್ಯಂತ ಕ್ಲಿಷ್ಟಕರವೂ

ಆಗಿರುತ್ತದೆ. ಆದುದರಿಂದ ವೇದಾಂತ ಶ್ರವಣಕ್ಕೆ ಸಮಾಧಾನದ ಮನಃಸ್ಥಿತಿಯು ಅತ್ಯಂತ ಆವಶ್ಯಕವಾಗಿರುತ್ತದೆ.

**ಓ.ಸಂ.161 :** ಶ್ರವಣಕ್ಕೆ ಕುಳಿತುಕೊಂಡಾಗ ಯಾರಾದರೂ ಹತ್ತಿರ ದುಂದುಭಿಯನ್ನು ಬಾರಿಸಿದರೂ ಅದರಿಂದ ವಿಚಲಿತನಾಗದೇ ವೇದಾಂತ ಶ್ರವಣದಲ್ಲೇ ಮಗ್ನನಾದರೆ ಅವನಿಗೆ ಉತ್ತಮವಾದ ಸಮಾಧಾನವಿದೆಯೆಂದು ಅರ್ಥವಾಗುತ್ತದೆ.

**ವಿವರಣೆ :** ಈ ಓವೀ ಮತ್ತು ಮುಂದಿನ ಎರಡು ಓವೀಗಳಲ್ಲಿ ವೇದಾಂತ ಶ್ರವಣ ಮಾಡುತ್ತಿರುವವನಲ್ಲಿ ಏಕಾಗ್ರತೆಯು ಎಷ್ಟಿರಬೇಕು ಎಂಬುದನ್ನು ತಿಳಿಸಿಹೇಳಿದ್ದಾರೆ. ದುಂದುಭಿ ( ನಗಾರಿ ) ಎಂದರೆ ಸಾಮಾನ್ಯವಾಗಿ ರಣರಂಗದಲ್ಲಿ ಬಾರಿಸುವ ಚರ್ಮ ವಾದ್ಯ. ಏಕಾಗ್ರತೆಯಿಂದ ವೇದಾಂತ ಶ್ರವಣವನ್ನು ಕೇಳುವಾಗ ಹತ್ತಿರದಲ್ಲೇ ದುಂದುಭಿಯನ್ನು ಮೊಳಗಿಸಿದರೆ ಆಗಲೂ ಕೇಳುವವನ ಏಕಾಗ್ರತೆಗೆ ಭಂಗ ಬರಲಿಲ್ಲವಾದರೆ ಆಗ ಅವನಿಗೆ ಒಳ್ಳೆಯ ಸಮಾಧಾನವಿದೆಯೆಂದು ಅರ್ಥಮಾಡಿಕೊಳ್ಳಬಹುದು.

**ಓ.ಸಂ.162 :** ಹಾಗೆಯೇ ಇರುವೆ ಕಡಿದರೆ ಅಥವಾ ಬಂಧುಗಳು ಮೃತರಾದ ಸುದ್ದಿಯನ್ನು ಕೇಳಿದರೆ ಆಗಲೂ ವೇದಾಂತ ಶ್ರವಣಮಾಡುವವನ ಏಕಾಗ್ರತೆಗೆ ಭಂಗ ಬರದಿದ್ದಲ್ಲಿ ಆಗ ಅವನಿಗೆ ಉತ್ತಮ ಸಮಾಧಾನವಿದೆಯೆಂದು ಅರ್ಥವಾಗುತ್ತದೆ.

**ವಿವರಣೆ :** ಈ ಓವೀಯಲ್ಲಿ ಇನ್ನೂ ಹೆಚ್ಚಿನ ವಿಘ್ನವನ್ನು ವೇದಾಂತ ಶ್ರವಣ ಮಾಡುವವನಿಗೆ ಒಡ್ಡಿ ಅವನ ಏಕಾಗ್ರತೆಯನ್ನು ಪರೀಕ್ಷೆಮಾಡುವುದಾಗಿರುತ್ತದೆ. ಒಂದು ವೇಳೆ ವೇದಾಂತ ಶ್ರವಣವನ್ನು ಕೇಳುವವನ ಕಾಲಿಗೆ ಕೆಂಪು ಇರುವೆಗಳು ಕಡಿದರೆ ಆಗ ಅವನಿಗೆ ಅತೀವ ನೋವು ಆಗುವುದು ಸಹಜವಾಗಿರುತ್ತದೆ. ಇಂತಹ ಸಂದರ್ಭದಲ್ಲೂ ಅವನು ಮಾಡುತ್ತಿರುವ ಶ್ರವಣದಲ್ಲಿ ಏಕಾಗ್ರತೆಯನ್ನು ಕಳೆದುಕೊಳ್ಳದೇ ಗುರುಗಳು ಹೇಳುವ ಮಾತನ್ನು ಅರ್ಥಮಾಡಿಕೊಳ್ಳಲು ಸಮರ್ಥನಾದಲ್ಲಿ ಅವನಿಗೆ ಉತ್ತಮ ಸಮಾಧಾನವಿದೆಯೆಂಬುದು ತಿಳಿಯುತ್ತದೆ. ಹಾಗೆಯೇ ಶ್ರವಣ ಕೇಳುತ್ತಿರುವಾಗ ಅವನ ಬಂಧು ಬಳಗದಲ್ಲಿ ಯಾರಾದರೂ ಸತ್ತುಹೋದ ವಿಚಾರವು ತಿಳಿದು ಬಂದರೂ ಕೂಡ ಅವನ ಚಿತ್ತ-ಚಾಂಚಲ್ಯದಿಂದ ಮನಸ್ಸಿನ ಏಕಾಗ್ರತೆಯು ನಾಶವಾಗದಿದ್ದರೆ ಅವನಲ್ಲಿ ಉತ್ತಮ ಸಮಾಧಾನವಿದೆ ಎಂದು ಅರ್ಥವಾಗುತ್ತದೆ.

**ಓ.ಸಂ.163 :** ಕೊನೆಯದಾಗಿ ವೇದಾಂತ ಶ್ರವಣ ಮಾಡುವಾಗ ಭಯದ ಕಾರಣವಿದ್ದರೂ ಚಿಂತಿಸದೇ ಏಕಾಗ್ರತೆಯಿಂದ ಕೇಳುತ್ತಿರುವವನಿಗೆ ಉತ್ತಮ ಸಮಾಧಾನವಿದೆಯೆಂದು ಹೇಳಬಹುದು.

**ವಿವರಣೆ :** ವೇದಾಂತ ಶ್ರವಣ ಮಾಡುವ ಕೋಣೆಯಲ್ಲಿ ಒಂದು ಸರ್ಪವು ಅಡಗಿ ಕುಳಿತಿದ್ದರೆ ಆಗ ಆ ಸರ್ಪವು ಹೋಗದ ಹೊರತು ಅಲ್ಲಿ ಭಯದ ವಾತಾವರಣವು ತಪ್ಪುವುದಿಲ್ಲ. ಇಂತಹ ಸಂದರ್ಭದಲ್ಲಿಯೂ ಗುರುಗಳು ವೇದಾಂತ ಪ್ರವಚನ ಮಾಡಿದರೆ ಆಗಲೂ ಯಾವ ಹೆದರಿಕೆ ಇಲ್ಲದೇ ಏಕಾಗ್ರತೆಯಿಂದ ಶ್ರವಣ ಮಾಡಿದಾಗ ಅವನಿಗೆ ಉತ್ತಮ ಸಮಾಧಾನವಿದೆಯೆಂದು ಅರ್ಥವಾಗುತ್ತದೆ. ಹಾಗೆಯೇ ಯಾಜ್ಞವಲ್ಕ್ಯರು ಮಾಡುತ್ತಿದ್ದ ಪ್ರವಚನವನ್ನು ಜನಕ ಮಹಾರಾಜನು ಶ್ರವಣ ಮಾಡುತ್ತಿದ್ದನು. ಇಲ್ಲಿಂದ ಕಾಣುತ್ತಿದ್ದ ತನ್ನ ಮಿಥಿಲಾ ಪಟ್ಟಣಕ್ಕೆ ಬೆಂಕಿ ಹತ್ತಿ ಉರಿಯುತ್ತಿದ್ದರೂ ಕೂಡ ಅವನು ವಿಚಲಿತನಾಗದೇ ಶ್ರವಣವನ್ನು ಏಕಾಗ್ರತೆಯಿಂದ ಕೇಳುತ್ತಿದ್ದನು. ಇದೇ ಉತ್ತಮ ಸಮಾಧಾನಕ್ಕಿರುವ ಒಳ್ಳೆಯ ಉದಾಹರಣೆ. ಇದು 'ಸಮಾಧಾನದ' ವಿವರಣೆಗೆ ಇರುವ ಕೊನೆಯ ಓವೀಯಾಗಿದೆ.

**ಓ.ಸಂ.164 :** ಈ ರೀತಿ 'ಶಮ', 'ದಮ', 'ತಿತಿಕ್ಷ', 'ಉಪರತಿ', 'ಶ್ರದ್ಧೆ' ಮತ್ತು 'ಸಮಾಧಾನ' ಎಂಬ ಆರು ಸಾಧನಗಳನ್ನು 'ಶಮಾದಿ ಷಟ್ಕ'ವೆನ್ನುತ್ತಾರೆ. ವಿವೇಕಾದಿ ಸಾಧನ ಚತುಷ್ಟಯಗಳಲ್ಲಿ ಈ ಷಟ್ಕವು ಮೂರನೆಯ ಸಾಧನವಾಗಿದೆ.

**ವಿವರಣೆ :** 'ಶಮ', 'ದಮ', 'ತಿತಿಕ್ಷ', 'ಉಪರತಿ', 'ಶ್ರದ್ಧೆ' ಮತ್ತು 'ಸಮಾಧಾನ' ಎಂಬ ಆರು ಸಾಧನಗಳನ್ನು 'ಶಮಾದಿ ಷಟ್ಕ'ವೆಂದು ಕರೆಯುತ್ತಾರೆ. ನಿಜವಾದ ಸಂಪತ್ತು ಎಂದರೆ ಇವೇ ಆರು ಸಾಧನಗಳು ಎಂದು ತಿಳಿಸಲು ಈ ಆರನ್ನು 'ಷಟ್ ಸಂಪತ್ತು' ಎಂದು ಕರೆಯಲಾಗಿದೆ. ಈ ಸಾಧನ ಚತುಷ್ಟಯಗಳು ಆತ್ಮಜ್ಞಾನ ಪ್ರಾಪ್ತಿಗೆ ಸಹಕಾರಿಯಾಗಿರುವಂತೆ ಈ ಓವೀಗಳಲ್ಲಿ ವಿವರಿಸಲಾಗಿದೆ ಎಂಬುದನ್ನು ಗಮನಿಸಬೇಕು. ಈ ಓವೀಯು 'ಶಮಾದಿ ಷಟ್ಕ'ಗಳ ವಿವರಣೆಯ ಸಮಾರೋಪವನ್ನು ಮಾಡುತ್ತದೆ. ಇಲ್ಲಿಗೆ ಸಾಧನ ಚತುಷ್ಟಯಗಳಲ್ಲಿ ಮೂರನೆಯದಾದ 'ಶಮಾದಿಷಟ್ಕ' ಎಂಬುದು ಮುಗಿಯಿತು. ಮುಂದಿನ ಓವೀಯಿಂದ ನಾಲ್ಕನೆಯದು ಮತ್ತು ಕೊನೆಯದಾದ 'ಮುಮುಕ್ಷುತ್ವ'ವನ್ನು ವಿವರಣೆಗೆ ತೆಗೆದುಕೊಳ್ಳಲಾಗಿದೆ.

**ಓ.ಸಂ.165** : ಈಗ ಸಾಧನ ಚತುಷ್ಟಯದಲ್ಲಿ ನಾಲ್ಕನೆಯ ಹಾಗೂ ಕೊನೆಯದಾದ 'ಮುಮುಕ್ಷುತ್ವ' ಎಂಬ ಸಾಧನೆಯ ವಿವರಣೆಯು ಪ್ರಾರಂಭವಾಗುತ್ತದೆ. ಇದು ಸಾಧಕನಿಗೆ ಶ್ರವಣಮಾಡಲು ಇರಬೇಕಾದ ಅಧಿಕಾರದ ಮುಖ್ಯ ಲಕ್ಷಣವಾಗಿರುತ್ತದೆ. ಆದುದರಿಂದ ಸಾಧಕನು ಇದನ್ನು ಸರಿಯಾಗಿ ತಿಳಿದುಕೊಳ್ಳಬೇಕು.

**ವಿವರಣೆ :** ಈ ಓವೀಯಿಂದ ಸಾಧನ ಚತುಷ್ಟಯಗಳಲ್ಲಿ ನಾಲ್ಕನೆಯ ಹಾಗೂ ಕೊನೆಯದಾದ 'ಮುಮುಕ್ಷುತ್ವ'ವೆಂಬ ಸಾಧನೆಯ ವಿವರಣೆಯು ಪ್ರಾರಂಭವಾಗುತ್ತದೆ. ಈ ಅಧ್ಯಾಯದ ಕೊನೆಯವರೆಗೂ 'ಮುಮುಕ್ಷುತ್ವ'ದ ಬಗ್ಗೆಯೇ ವಿವರಣೆ ಇರುತ್ತದೆ. ಈ ಸಾಧನ ಚತುಷ್ಟಯಗಳು ವೇದಾಂತ ಶಾಸ್ತ್ರವನ್ನು ತಿಳಿದುಕೊಳ್ಳಲು ಸಾಧಕನಲ್ಲಿ ಇರಬೇಕಾದ ಅಧಿಕಾರೀ ಲಕ್ಷಣಗಳಾಗಿವೆ. 'ಮುಮುಕ್ಷುತ್ವ'ವು ಈ ನಾಲ್ಕರಲ್ಲಿ ಅತ್ಯಂತ ಮುಖ್ಯವಾದ ಅಧಿಕಾರೀ ಲಕ್ಷಣವಾಗಿರುತ್ತದೆ. ಏಕೆಂದರೆ ಈ 'ಮುಮುಕ್ಷುತ್ವ'ಕ್ಕಾಗಿಯೇ ಉಳಿದ ಮೂರೂ ಸಾಧನಗಳಿರುವುದು ಸ್ಪಷ್ಟವಾಗುತ್ತದೆ. ವಿವೇಕ ಮತ್ತು ವೈರಾಗ್ಯಗಳು ಮೋಕ್ಷ ಪಡೆಯುವ ಉದ್ದೇಶದಿಂದಲೇ ಇರುವುದರಿಂದ ಎಲ್ಲಿ 'ಮುಮುಕ್ಷುತ್ವ'ವು ಬಲವಾಗಿರುತ್ತದೋ ಅಲ್ಲಿ ಉಳಿದ ಸಾಧನಗಳು ಬಲವಾಗಿರುತ್ತವೆ. ಆದುದರಿಂದ ಸಾಧಕನು 'ಮುಮುಕ್ಷುತ್ವ'ದ ಬಗ್ಗೆ ಸರಿಯಾಗಿ ತಿಳಿದುಕೊಳ್ಳಬೇಕು.

**ಓ.ಸಂ.166** : ಯಾವ ಒಬ್ಬನೇ ದೇವನು ತನ್ನ ಸ್ವರೂಪದಿಂದ ನಿತ್ಯನಾಗಿರುತ್ತಾನೋ ಅವನು ಪ್ರಾಪ್ತನಾಗಿ ಸಾಧಕನ ಜನನ-ಮರಣವೆಂಬ ಭವ-ಬಂಧನವು ಕೊನೆಗೊಳ್ಳಲಿ ಎಂಬ ಆಶಯವು ಸಾಧಕನಲ್ಲಿರುತ್ತದೆ.

**ವಿವರಣೆ :** ಮೊದ ಮೊದಲು ಸಾಧಕನಲ್ಲಿ ಕೇವಲ ಧಾರ್ಮಿಕ ನಂಬಿಕೆ ಹಾಗೂ ಆಚರಣೆಗಳು ಮಾತ್ರ ಇರುತ್ತವೆಯೇ ವಿನಃ ಅವನಿಗೆ ವೇದಾಂತ ವಿಚಾರಗಳು ತಿಳಿದಿರುವುದಿಲ್ಲ. ಜಗತ್ತಿನ ಸೃಷ್ಟಿ-ಸ್ಥಿತಿ-ಲಯಗಳನ್ನು ಮಾಡುವ ದೇವನು ನಿತ್ಯನಿದ್ದಾನೆ. ಅವನ ಅನುಗ್ರಹದಿಂದ ಏನನ್ನಾದರೂ ಸಾಧಿಸಬಹುದು. ಪರಮಾತ್ಮನು ಸರ್ವಶಕ್ತನು ಹಾಗೂ ಸರ್ವಜ್ಞನಿರುವುದರಿಂದ ಸಾಧಕನ ಎಲ್ಲ ಬೇಡಿಕೆಗಳನ್ನೂ ಈಡೇರಿಸುವ ಸಾಮರ್ಥ್ಯವು

ಅವನಿಗಿರುತ್ತದೆ. ಹೀಗೆ ಸಾಧಕನು ತಾನು ನಂಬಿರುವ ನಿತ್ಯ ದೇವನನ್ನು ಪ್ರಾರ್ಥಿಸಿ ತನ್ನ ಪಾರಮಾರ್ಥಿಕ ಬೇಡಿಕೆಯನ್ನು ಈಡೇರಿಸಿ ತನ್ನ ಭವ-ಬಂಧನವನ್ನು ಆ ದೇವನು ಕಳೆಯಲಿ ಎಂದು ಆಶಿಸುತ್ತಾನೆ. ಆದರೆ ಸಾಧಕನು ಇಲ್ಲಿಯವರೆಗೆ ನಿಷ್ಕಾಮಕರ್ಮವನ್ನು ಮಾಡಿ ಚಿತ್ತಶುದ್ಧಿಯನ್ನು ಪಡೆದವನಾಗಿದ್ದಾನೆ. ಆದುದರಿಂದ ಅವನು ಯಾವುದೇ ಇಹ-ಪರ ಲೋಕದ ಸುಖವನ್ನು ಅಪೇಕ್ಷಿಸದೇ ಕೇವಲ ತನ್ನ ಜನನ-ಮರಣಗಳ ಭವ-ಬಂಧನವೆಂಬ ವಿಷಚಕ್ರವು ಕೊನೆಗೊಳ್ಳಲಿ ಎಂಬ ಆಶಯವು ಮಾತ್ರ ಅವನಲ್ಲಿರುತ್ತದೆ.

**ಓ.ಸಂ.167** : ಯಾವ ಒಬ್ಬನೇ ದೇವನು ತನ್ನ ಸ್ವರೂಪದಿಂದ ನಿತ್ಯನಾಗಿರುತ್ತಾನೋ ಅವನಲ್ಲಿ ನಮ್ಮಂತೆ ಸುಖ-ದುಃಖಗಳು ಇರುವಂತಿಲ್ಲ. ಆದುದರಿಂದ ಅವನು ಪರಮಾನಂದ ಸ್ವರೂಪನೇ ಇರುತ್ತಾನೆ.

**ವಿವರಣೆ** : ಪರಮಾತ್ಮನು ನಮ್ಮಂತೆ ಹುಟ್ಟು-ಸಾವುಗಳನ್ನು ಅನುಭವಿಸುತ್ತಾನೆ ಹಾಗೂ ನಮ್ಮಂತೆ ಸುಖ ದುಃಖಗಳನ್ನು ಅನುಭವಿಸುತ್ತಾನೆ ಎಂದು ಹೇಳಲು ಸಾಧ್ಯವಿಲ್ಲ. ನಮ್ಮಂತೆ ಅಲ್ಪ ಶಕ್ತಿ, ಅಲ್ಪ ಜ್ಞಾನ, ಅಲ್ಪ ಸುಖವು ಪರಮಾತ್ಮನಿಗೆ ಇರಲು ಸಾಧ್ಯವಿಲ್ಲ. ಏಕೆಂದರೆ ಈ ದೋಷಗಳೆಲ್ಲವೂ ಇರುವುದು ಜೀವಿಗಳಲ್ಲಿ ಮಾತ್ರ. ಬ್ರಹ್ಮನಾದಿಯಾಗಿ ಸ್ಥಾವರದವರೆಗೆ ದೇವಗಣ, ಮನುಷ್ಯಗಣ, ಮುಂತಾದ ಅಸಂಖ್ಯಾತ ಗಣಗಳು ಸೇರಿದಂತೆ ಎಲ್ಲರೂ ಜೀವಿಗಳೇ ಆಗಿರುತ್ತಾರೆ. ಆದರೆ ದೇವರ ದೇವನಾದವನು ಜೀವಿಗಳ ಈ ಇತಿಮಿತಿಗಳನ್ನು ಹೊಂದಿದರೆ ಅವನು ಈಶ್ವರನಾಗಲಾರ. ಈಶ್ವರನಾದವನಿಗೆ ಈ ಇತಿಮಿತಿಗಳು ಇರುವಂತಿಲ್ಲ. ಅವನು ಅಖಿಲಾಂಡಕೋಟಿ ಬ್ರಹ್ಮಾಂಡ ನಾಯಕನು; ಅವನು ಅನಂತಗುಣಗಣ ಪರಿಪೂರ್ಣನು; ಅವನು ಸರ್ವಜ್ಞನು; ಸರ್ವಶಕ್ತಿಮಾನ್ ಆಗಿರುತ್ತಾನೆ. ಅವನು ಸಚ್ಚಿದಾನಂದ ಸ್ವರೂಪನು, ಅಂದರೆ ಅವನಿಗೆ 'ನಿತ್ಯ ಇರುವಿಕೆ', 'ಶುದ್ಧ ಚೈತನ್ಯ' ಹಾಗೂ 'ಪರಮಾನಂದ' - ಈ ಸ್ವರೂಪ ಲಕ್ಷಣಗಳು ನಿತ್ಯ ಇರುತ್ತವೆ.

**ಓ.ಸಂ.168** : 'ಮುಮುಕ್ಷು' ಆದ ಸಾಧಕನಿಗೆ ಈ ಅನಿತ್ಯವೂ ಹಾಗೂ ದುಃಖರೂಪವೂ ಆದ ಜೀವನವು ಕೊನೆಗೊಳ್ಳಲಿ ಮತ್ತು ಮೋಕ್ಷವು ( ನಿತ್ಯ ಪರಮಾನಂದ ಸ್ವರೂಪವು ) ಅವನದಾಗಲಿ ಎಂಬ ಆಶಯವು ತೀವ್ರವಾದ ಆತುರತೆಯಿಂದ ಸಾಧಕನಲ್ಲಿ ವ್ಯಕ್ತವಾದರೆ ಅದನ್ನು ಮುಮುಕ್ಷುತ್ವವೆನ್ನುವರು.

**ವಿವರಣೆ :** ಈ ಓವೀಯಲ್ಲಿ ಮುಮುಕ್ಷುತ್ವದ ವ್ಯಾಖ್ಯೆಯನ್ನು ಕೊಡಲಾಗಿದೆ. ಸಾಧಕನಲ್ಲಿ ಯಾವಾಗ ಅನಿತ್ಯವಾದ ಹಾಗೂ ದುಃಖರೂಪವಾಗಿರುವ ಜೀವನದ ಬಗ್ಗೆಯೇ ಜಿಗುಪ್ಸೆ ಬಂದು ನಿಜವಾದ ವೈರಾಗ್ಯ ಉದಯಿಸಿ ಶಾಶ್ವತವಾದ ಆನಂದವು ನಿತ್ಯ ಪ್ರಾಪ್ತವಾಗಲು ಅಂದರೆ ಮೋಕ್ಷದ ಪ್ರಾಪ್ತಿಯು ಅವನಿಗೆ ಶೀಘ್ರವಾಗಿ ಲಭಿಸಲು ತೀವ್ರ ಆತುರತೆಯನ್ನು ಹೊಂದಿರುವುದೇ ಮುಮುಕ್ಷುತ್ವವು ಆಗಿರುತ್ತದೆ. ಇಲ್ಲಿ ಮುಖ್ಯವಾಗಿ ಮೂರು ಅಂಶಗಳನ್ನು ಗಮನಿಸಬಹುದು. ಮೊದಲನೆಯದು, ದುಃಖ ರೂಪದ ಭವ ಬಂಧನವು ಕೊನೆಗೊಳ್ಳುವುದು, ಅಂದರೆ ಜೀವತ್ವದ ನಾಶವಾಗುವುದು; ಎರಡನೆಯದು, ಪರಮಾನಂದ ಸ್ವರೂಪದ ಮೋಕ್ಷವನ್ನು ಪಡೆಯುವುದು; ಮೂರನೆಯದು, ಇದು ಆದಷ್ಟು ಶೀಘ್ರವಾಗಿ ಕೈಗೂಡಲೆಂದು ತೀವ್ರವಾದ ಆತುರತೆಯನ್ನು ತೋರುವುದು. ಈ ಮೂರೂ ಅಂಶಗಳು ಕೈಗೂಡಬೇಕಾದರೆ ಸದ್ಗುರುವಿನ ಮಾರ್ಗದರ್ಶನವು ಆವಶ್ಯಕವಾಗಿ ಬೇಕೇ ಬೇಕಾಗುತ್ತದೆ.

**ಓ.ಸಂ.169 :** ಮುಮುಕ್ಷುವಾದ ಸಾಧಕನು ಮೋಕ್ಷಾಪೇಕ್ಷೆಯನ್ನು ಈಡೇರಿಸಿಕೊಳ್ಳಲು ಸದ್ಗುರುವನ್ನು ಶರಣುಹೋಗಿ ಅವನಿಗೆ ತನ್ನ ಕಾಯಾ-ವಾಚಾ-ಮನಸಾ ಹಾಗೂ ಸಕಲವನ್ನು ಅರ್ಪಿಸಲು ಮುಂದಾಗುತ್ತಾನೆ.

**ವಿವರಣೆ :** ಮುಮುಕ್ಷುವಾದ ಸಾಧಕನು ಈ ದುಃಖಕಾರಕವಾದ ಭವ-ಬಂಧನವು ಕೊನೆಗೊಳ್ಳಲಿ ಎಂದು ತನ್ನ ಪರಮಾನಂದ ಸ್ವರೂಪವನ್ನು ಅಂದರೆ ಮೋಕ್ಷವನ್ನು ಪ್ರಾಪ್ತಮಾಡಿಕೊಳ್ಳಲು ತನ್ನ ಸದ್ಗುರುವನ್ನೇ ಅವಲಂಬಿಸಿದ್ದಾನೆ. ತಾನು ಉಪರತನಾದಾಗಲೇ ಆರಿಸಿಕೊಂಡ ಈ ಸದ್ಗುರುವನ್ನು ಮೋಕ್ಷಕ್ಕಾಗಿ ಆಗುತ್ತಿರುವ ತಳಮಳವನ್ನು ಸಹಿಸಲಾರದೇ ಈಗ ಸಂಪೂರ್ಣವಾಗಿ ಶರಣಾಗತನಾಗಲು ನಿರ್ಧರಿಸಿದ್ದಾನೆ. ದೇವರಿಗಿಂತ ಈ ಸದ್ಗುರುವಿನ ಮೇಲೆಯೇ ಹೆಚ್ಚಾಗಿ ಪೂರ್ಣ ಶ್ರದ್ಧೆಯನ್ನು ಇಟ್ಟಿದ್ದಾನೆ. ಅವನು ತನ್ನ ದೇಹದಿಂದ ಮನಸ್ಸಿನಿಂದ ಹಾಗೂ ವಾಣಿಯಿಂದ ಸಂಪೂರ್ಣವಾಗಿ ಗುರುವಿಗೆ ತನ್ನನ್ನು ತಾನು ಅರ್ಪಣೆ ಮಾಡಿಕೊಂಡಿದ್ದಾನೆ. ಮುಂದಿನ ಓವೀಗಳಲ್ಲಿ ಮುಮುಕ್ಷುವಿನ ಮನಃಸ್ಥಿತಿಯನ್ನು ವರ್ಣಿಸಲಾಗಿದೆ.

**ಓ.ಸಂ.170** : ಮುಮುಕ್ಷು ಸಾಧಕನು ಈಗಾಗಲೇ ಕಾಯಾ ವಾಚಾ ಮನಸ್ಸುಗಳನ್ನು ಗುರುವಿಗೆ ಅರ್ಪಿಸಿರುವುದರಿಂದ ಅವುಗಳನ್ನು ತನ್ನವೆಂದು ಅವನಿಗೆ ಹೇಳಲಾಗುವುದಿಲ್ಲ. ಏನು ಮಾಡಿದರೂ ತನ್ನ ಮನಸ್ಸು ಸಂತೋಷಪಡದೇ ಇರುವುದರಿಂದ ಹಗಲು-ರಾತ್ರಿ ಚಿಂತಿಸುತ್ತಾ ಸೊರಗುತ್ತಿದ್ದಾನೆ. ಇದೇ ನಿಜವಾದ ಮುಮುಕ್ಷುವಿನ ಲಕ್ಷಣವಾಗಿದೆ.

**ವಿವರಣೆ** : ಮುಮುಕ್ಷುವು ಉಪರತನಾದಾಗಲೇ ಸದ್ಗುರುವನ್ನು ಶೋಧಿಸಿ ಅವನಿಂದ ಮಾರ್ಗದರ್ಶನ ಪಡೆಯಲು ನಿಶ್ಚಯಿಸಿರುತ್ತಾನೆ. ಅಂತಹ ಸಾಧಕನು ತನ್ನ ಮನಸ್ಸಿನಿಂದಲೇ ತನ್ನ ಕಾಯಾ-ವಾಚಾ-ಮನಸ್ಸುಗಳನ್ನು ಸದ್ಗುರುವಿನ ಸೇವೆಗೆ ಸಂಪೂರ್ಣ ಸಮರ್ಪಿಸಿಬಿಟ್ಟಿದ್ದಾನೆ. ಒಮ್ಮೆ ಅರ್ಪಿಸಿದವುಗಳನ್ನು ಪುನಃ ತಾನು ಹಿಂತಿರುಗಿ ಪಡೆಯಲಾಗುವುದಿಲ್ಲವೆಂದು ಅನೇಕ ಸಲ ಯೋಚಿಸುತ್ತಾನೆ. ಅವನ ಮನಸ್ಸು ಆನಂದವನ್ನು ಪಡೆಯುವ ಸಾಮರ್ಥ್ಯವನ್ನು ಕಳೆದುಕೊಂಡಿರುತ್ತದೆ. ಮುಂದೆ ಅವನು ಏನು ಮಾಡಬೇಕೆಂದು ತಿಳಿಯದೇ ಹಗಲು-ರಾತ್ರಿ ಚಿಂತಿಸುತ್ತಾ ಸೊರಗುತ್ತಾನೆ. ಈ ರೀತಿ ತಳಮಳಗೊಳ್ಳುವ ಮನಸ್ಥಿತಿಯು ಮುಮುಕ್ಷುವಿನ ಮುಖ್ಯ ಲಕ್ಷಣವಾಗಿರುತ್ತದೆ.

**ಓ.ಸಂ.171** : ಈ ಮುಮುಕ್ಷುವು ವಿಷಯ ಸುಖವನ್ನು ವಿಷಸಮಾನವೆಂದೆಣಿಸಿ ಅವುಗಳನ್ನೇ ಚಿಂತಿಸುವ ತನ್ನ ಮನಸ್ಸನ್ನು ಹೀಗಳೆಯುತ್ತಾನೆ. ಅವನಿಗೆ ದೇವತೆಗಳು ಕೂಡ ಅನಿತ್ಯವೆಂದು ತಿಳಿದು ಅವರನ್ನೆಲ್ಲ ನಮ್ಮಂತೆ ಸಾಮಾನ್ಯರನ್ನಾಗಿ ನಿಕೃಷ್ಟರಂತೆ ಕಾಣುತ್ತಾನೆ.

**ವಿವರಣೆ** : ಈ ಮುಮುಕ್ಷುವು ವಿವೇಕಶಾಲಿಯಾಗಿರುವುದರಿಂದ ಹಾಗೂ ವೈರಾಗ್ಯ ಭಾವನೆಯನ್ನು ಹೊಂದಿರುವುದರಿಂದ ವಿಷಯ ಸುಖವನ್ನು ತುಚ್ಛವಾಗಿ ಕಂಡು ಕೊನೆಗೆ ಉಪರತನಾಗಿ ಅವನ್ನೆಲ್ಲ ತ್ಯಾಗ ಮಾಡಿರುತ್ತಾನೆ. ಆದರೂ ಒಮ್ಮೊಮ್ಮೆ ಕಪಿಯಂತೆ ಚಂಚಲವಾಗಿರುವ ಅವನ ಮನಸ್ಸು ವಿಷಯ ಸುಖವನ್ನು ಆಗಾಗ ಚಿಂತನೆ ಮಾಡುವುದರಿಂದ ಅವನು ತನ್ನ ಮನಸ್ಸಿನ ದೌರ್ಬಲ್ಯವನ್ನು ಕುರಿತು ಅದನ್ನು ಧಿಕ್ಕರಿಸುತ್ತಾನೆ. ಮೊದಲಿನಂತೆ ಅವನು ತನ್ನ ಮನಸ್ಸಿನ ದೌರ್ಬಲ್ಯವನ್ನು ಕುರಿತು ಅದನ್ನು ಧಿಕ್ಕರಿಸುತ್ತಾನೆ. ಮೊದಲಿನಂತೆ ಇವನು ಇಂತಹ ವಿಷಯಗಳಿಗೆ ದೇವತೆಗಳಿಗೆ ಮೊರೆ ಹೋಗುತ್ತಾನೆ. ಆದರೆ ಈಗ ಹಾಗೆ ಮಾಡುವುದಿಲ್ಲ. ಏಕೆಂದರೆ ಈ ದೇವತೆಗಳೂ ಕೂಡ ಅನಿತ್ಯರಾಗಿದ್ದು ಅವರನ್ನು ಮನುಷ್ಯರಂತೆ ಸಾಮಾನ್ಯರೆಂದೇ ನಿಕೃಷ್ಟರನ್ನಾಗಿ ತಿಳಿಯುತ್ತಾನೆ.

**ಓ.ಸಂ.172** : ಮುಮುಕ್ಷುವಾದ ಸಾಧಕನು ತಾನು ಪಾಪಿ ಹಾಗೂ ದುರಾಚಾರಿ ಎಂದು ತನ್ನ ಹಿಂದಿನ ದೋಷಗಳ ನೆನಪು ಮಾಡಿಕೊಂಡು ತನ್ನನ್ನು ತಾನು ಹಳಿದುಕೊಳ್ಳುತ್ತಾನೆ. ಹೀಗೆ ಒಂದು ಕ್ಷಣವೂ ಮನಸ್ಸಿಗೆ ಸಮಾಧಾನವಿಲ್ಲದೇ ತನ್ನಲ್ಲೇ ತಳಮಳಗೊಳ್ಳುತ್ತಾನೆ.

**ವಿವರಣೆ** : ಮುಮುಕ್ಷುವಾದ ಸಾಧಕನಿಗೆ ತಾನು ಹಿಂದೆ ಮಾಡಿದ ದೋಷಗಳ ಸ್ಮರಣೆಯು ಆಗಾಗ ಬರುತ್ತಿರುತ್ತದೆ. ಇದರಿಂದ ತನ್ನನ್ನು ತಾನು ಪಾಪಿಷ್ಟನೆಂದೂ, ಅನಾಚಾರಿಯೆಂದೂ ಹಾಗೂ ಅವಿವೇಕಿಯೆಂದೂ ಅನೇಕ ರೀತಿಯಲ್ಲಿ ಹಳಿದುಕೊಳ್ಳುತ್ತಾನೆ. ಮೋಕ್ಷಕ್ಕೆ ಬೇಕಾಗುವ ಅಧಿಕಾರವು ತನಗಿಲ್ಲವೆಂಬ ಭಾವ ಬಂದು ಅವನಲ್ಲಿ ಕೀಳರಿಮೆಯು ಕಾಡುತ್ತದೆ. ಇದು ಮುಮುಕ್ಷುಗಳಲ್ಲಿ ಇರಲೇಬೇಕಾದ ಮನಃಸ್ಥಿತಿಯಾಗಿದೆ. ಏಕೆಂದರೆ ಇದರಿಂದ ಸಾಧಕನ ಅಹಂಕಾರವು ಮರ್ದನವಾಗಿ ಶಿಷ್ಯನಿಗಿರಬೇಕಾದ ವಿನೀತ ಭಾವವು ಪ್ರಕಟವಾಗುತ್ತದೆ. ಹೀಗೆ ಮುಮುಕ್ಷು ಸಾಧಕನು ಅಶಾಂತಿಯಿಂದ ಮನಸ್ಸಿನ ಸಮಾಧಾನವಿಲ್ಲದೇ ಒಂದೇ ಸಮನೆ ತಳಮಳಗೊಳ್ಳುತ್ತಿದ್ದಾನೆ. ಮೋಕ್ಷಕ್ಕಾಗಿ ಸಾಧಕನು ಹೀಗಿರುವುದೇ ಮುಮುಕ್ಷತ್ವದ ಲಕ್ಷಣವಾಗಿರುತ್ತದೆ.

**ಓ.ಸಂ.173** : ಇಂತಹ ಕೀಳರಿಮೆಯಿಂದಲೂ ಹಾಗೂ ಅನಾಥ ಭಾವದಿಂದಲೂ ಬಳಲುತ್ತಿರುವ ಮುಮುಕ್ಷು ಸಾಧಕನು ತನಗೆ ಸದ್ಗುರುವಿನ ಭೇಟಿ ಆಗುವುದರ ಬಗ್ಗೆ ಅದು ಹೇಗೆ ಸಾಧ್ಯವಾದೀತೆಂದು ಚಿಂತಿಸುತ್ತಾನೆ. ಒಂದುವೇಳೆ ಭೇಟಿ ಆದರೂ ಕೂಡ ತನ್ನನ್ನು ಅವರು ಸ್ವೀಕರಿಸುವರೇ ಎಂಬ ಸಂಶಯವು ಅವನನ್ನು ಕಾಡುತ್ತದೆ.

**ವಿವರಣೆ** : ಮುಮುಕ್ಷು ಸಾಧಕನು ಗುರುಗಳ ಆಶ್ರಯದಲ್ಲಿದ್ದರೂ ವೈಯಕ್ತಿಕವಾಗಿ ಅವರನ್ನು ಭೇಟಿಯಾಗಲು ಧೈರ್ಯ ಸಾಲದು. ಏಕೆಂದರೆ ಅವನಿಗೆ ತಾನು ಪಾಪಿಷ್ಟನೆಂಬ ಕೀಳರಿಮೆ ಕಾಡುತ್ತಿದೆ. ಆದುದರಿಂದ ಇವನನ್ನು ಗುರುಗಳು ಭೇಟಿಯಾಗುವರೋ ಇಲ್ಲವೋ ಎನ್ನುವ ಬಗ್ಗೆಯೇ ಸಾಧಕನಿಗೆ ಸಂಶಯವು ಕಾಡುತ್ತಿದೆ. ಒಂದುವೇಳೆ ಅವರೇ ಇವನನ್ನು ಭೇಟಿಯಾದರೂ ಇವನನ್ನು ಅವರು ಒಪ್ಪಿಕೊಳ್ಳುತ್ತಾರೋ ಇಲ್ಲವೋ ಎನ್ನುವ ಬಗ್ಗೆಯೂ ಇವನಿಗೆ ಸಂಶಯವು ಕಾಡುತ್ತಿರುತ್ತದೆ. ಇದರಿಂದ ಅವನ ಮನಸ್ಸಿಗೆ ಶಾಂತಿ ಇಲ್ಲದೇ ಅದೇ ಚಿಂತೆಯಲ್ಲಿ ರಾತ್ರಿಯಲ್ಲಿ ನಿದ್ರೆಯೂ ಅವನಿಗೆ ಬರುತ್ತಿಲ್ಲ.

ನಾಶವಾಗುತ್ತದೆ. ನಂತರ ಉಪಾಸನೆಯಿಂದ ತಾನು ಕರ್ತೃ ಹಾಗೂ ಭೋಕ್ತೃ ಇದ್ದೇನೆಂಬ ಭ್ರಾಂತಿಯೂ ಹೋಗಿ ವಿಕ್ಷೇಪವೆಂಬ ಎರಡನೆಯ ಆವರಣ ದೋಷವು ನಾಶವಾಗುತ್ತಿದ್ದಂತೆ ಸಾಧಕನಿಗೆ ಒಂದೊಂದೇ ವಿವೇಕಾದಿ ಸಾಧನಗಳು ಕೈಗೂಡಿ ಸಾಧನ-ಚತುಷ್ಟಯ ಸಂಪನ್ನನಾಗುತ್ತಾನೆ. ನಂತರ ಗುರುಗಳ ಮುಖೇನ ಸಾಧಕನು ವೇದಾಂತ ಸಾಧನಗಳನ್ನು ಮಾಡಿ ವೇದಾಂತ ಶಾಸ್ತ್ರದ ಪರೋಕ್ಷ ಜ್ಞಾನವನ್ನು ಪಡೆಯುತ್ತಾನೆ. ಈ ಪರೋಕ್ಷ ಜ್ಞಾನದ ಬಗ್ಗೆಯೇ ಮುಂದಿನ ಎರಡು ಓವೀಗಳನ್ನು ವಿವರಿಸಲಾಗಿದೆ.

**ಓ.ಸಂ.176** : ಗುರುವಿನ ಪ್ರವಚನಗಳ ಶ್ರವಣದಿಂದ ಸರ್ವವ್ಯಾಪಕನಾದ ಬ್ರಹ್ಮನಿದ್ದಾನೆಂದು ಸಾಧಕನಿಗೆ ತಿಳಿದರೂ ಆ ಬ್ರಹ್ಮವೇ ತನ್ನ ಆತ್ಮವೆಂದು ತಿಳಿಯುವುದಿಲ್ಲ. ಇದಕ್ಕೆ ಪರೋಕ್ಷ ಜ್ಞಾನವೆನ್ನುವರು.

**ವಿವರಣೆ** : ಸಾಧಕನು ಶಿಷ್ಯನಾಗಿ ಗುರುಗಳ ವೇದಾಂತ ಶ್ರವಣದಿಂದ, 'ಬ್ರಹ್ಮ', 'ಜಗತ್ತು' ಮತ್ತು 'ಜೀವ'ರ ಬಗ್ಗೆ ತಿಳಿದುಕೊಂಡಿದ್ದಾನೆ. ಬ್ರಹ್ಮವೇ ಸಚ್ಚಿದಾನಂದ ಸ್ವರೂಪನಿರುವುದರಿಂದ ಅಸ್ತಿ-ಭಾತಿ-ಪ್ರಿಯ ಸ್ವರೂಪದಿಂದ ಇಡೀ ಜಗತ್ತನ್ನು ಅವನೇ ವ್ಯಾಪಿಸಿದ್ದಾನೆಂದು ತಿಳಿಯುತ್ತದೆ. ಇಷ್ಟೇ ಹೇಳಿದರೆ ಶ್ರುತಿಗೆ ಸಾಕಾಗಿತ್ತು; ಆದರೆ ಶ್ರುತಿಯು "ಅಯಂ ಆತ್ಮಾ ಬ್ರಹ್ಮ" ( ಈ ಆತ್ಮನೇ ಬ್ರಹ್ಮ ), "ಅಹಂ ಬ್ರಹ್ಮಾಸ್ಮಿ"( ನಾನು ಬ್ರಹ್ಮನಿದ್ದೇನೆ ) ಎಂಬೀ ಮುಂತಾದ ಮಹಾ ವಾಕ್ಯಗಳಿಂದ ಜೀವೇಶ್ವರರ ಅಭೇದವನ್ನು ಪ್ರತಿಪಾದನೆ ಮಾಡುತ್ತಿರುವುದರ ಮರ್ಮವು ಅವನಿಗೆ ಅರ್ಥವಾಗುತ್ತಿಲ್ಲ. ಬ್ರಹ್ಮನು ಏಕೈಕ ಸತ್ಯನೆಂದು ನಮಗೆ ಅನುಭವಕ್ಕೆ ಬರದಿದ್ದರೂ ತರ್ಕದಿಂದ ಅದನ್ನು ಸಿದ್ಧಮಾಡಬೇಕಾಗುತ್ತದೆ. ಇಂತಹ ಜ್ಞಾನಕ್ಕೆ ಪರೋಕ್ಷ ಜ್ಞಾನವೆಂದು ಹೆಸರು. ಏಳನೆಯ ಅಧ್ಯಾಯವು ಪೂರ್ಣವಾಗಿ ಅಪರೋಕ್ಷ ಜ್ಞಾನದ ಬಗ್ಗೆಯೇ ನಮಗೆ ತಿಳಿಸುವುದು.

**ಓ.ಸಂ.177** : 'ಯಾವ ಬ್ರಹ್ಮವು ಸರ್ವವ್ಯಾಪಕವಾಗಿದ್ದು ತನ್ನೊಳಗೂ ಇರುವುದು ನಿಜವೇ ಆದರೂ ಅದು ತನಗೆ ಪ್ರಾಪ್ತವಾಗಿ ತನ್ನ ಅನುಭವಕ್ಕಿನ್ನೂ ಬರಬೇಕಾಗಿದೆ' ಎಂದು ಮುಮುಕ್ಷುವಾದ ಸಾಧಕನು ಚಡಪಡಿಸುತ್ತಾನೆ.

**ವಿವರಣೆ :** ಹೀಗೆ ಮುಮುಕ್ಷುವಾದ ಸಾಧಕನು ಗುರು ಮುಖೇನ ಶ್ರವಣ-ಮನನಗಳನ್ನು ಮಾಡಿ ಹೇಗೆ ಬ್ರಹ್ಮನು ಏಕೈಕ ಸತ್ಯವೆಂಬುದನ್ನು ಅರ್ಥಮಾಡಿಕೊಳ್ಳುತ್ತಾನೆ ? ಅಲ್ಲದೇ ಬ್ರಹ್ಮವು ಏಕೈಕ ಸತ್ಯವಾಗಿ ವ್ಯಾಪಕವೂ ಆದಾಗ ಅದು ಹೇಗೆ ಈ ಮುಮುಕ್ಷುವನ್ನು ವ್ಯಾಪಿಸುತ್ತದೆ ಎಂಬುದನ್ನೂ ಕೂಡ ಅರಿತಿದ್ದಾನೆ. ಆದರೂ ಈ ಪರೋಕ್ಷ ಜ್ಞಾನದಿಂದ ಅವನಿಗೆ ತೃಪ್ತಿ ಬರುತ್ತಿಲ್ಲ. ಏಕೆಂದರೆ ತನ್ನನ್ನೂ ವ್ಯಾಪಿಸಿದ ಆ ಬ್ರಹ್ಮವು ತನ್ನ ಆತ್ಮನೇ ಆಗಿದ್ದಲ್ಲಿ ಅದು ತನಗೆ ಅನುಭವಕ್ಕೆ ಬರಬೇಕಾಗುತ್ತದೆ. ಆದರೆ ತನಗೆ ಅದು ಅನುಭವಕ್ಕೆ ಬರುವಂತೆ ಇನ್ನೂ ಪ್ರಾಪ್ತವಾಗಿಲ್ಲ ಎಂದು ಚಡಪಡಿಸುತ್ತಾನೆ.

**ಓ.ಸಂ.178 :** ಹೀಗೆ ಮುಮುಕ್ಷು ಸಾಧಕನು ತಾನು ಬ್ರಹ್ಮನು ಎಂಬುದನ್ನು ಅನುಭವ ಸಮೇತ ಅರ್ಥಮಾಡಿಕೊಳ್ಳಲು ನಾನಾ ಕಷ್ಟಗಳನ್ನು ಅನುಭವಿಸುತ್ತಾನೆ. ಅಂತಹವನೇ ಈ ಗ್ರಂಥವನ್ನು ಓದಲು ಮುಖ್ಯ ಅಧಿಕಾರಿಯಾಗಿದ್ದಾನೆ.

**ವಿವರಣೆ :** ಮುಮುಕ್ಷು ಸಾಧಕನು ತಾನು ಗುರುಮುಖೇನ ಶ್ರವಣ ಮನನಗಳನ್ನು ಮಾಡಿ ಬ್ರಹ್ಮನು ಏಕಮೇವ ಅದ್ವಿತೀಯನು ( 'ಏಕಮೇವ ಅದ್ವತೀಯಮ್ ಬ್ರಹ್ಮ' ) ಎಂಬ ಪರೋಕ್ಷ ಜ್ಞಾನವನ್ನು ಪಡೆದರೂ ಅನುಭವಾನುಸಾರವಾಗಿ ತಾನು ಬ್ರಹ್ಮವಾಗಿದ್ದೇನೆ ಎಂಬ ಜ್ಞಾನವು ಉಂಟಾಗಿಲ್ಲವೆಂದು ಪರಿತಪಿಸುತ್ತಿದ್ದಾನೆ. ಇದಕ್ಕಾಗಿ ಗುರುಗಳು ಹೇಳಿದಂತೆ ನಿದಿಧ್ಯಾಸನಾದಿ ಸಾಧನಗಳನ್ನು ಹಗಲು ಇರುಳು ಮಾಡುವುದು, ಗುರುಗಳ ಸೇವೆಯನ್ನು ಅತ್ಯಂತ ಪ್ರಾಮಾಣಿಕವಾಗಿ ಮಾಡುವುದು ಮುಂತಾಗಿ ಒಂದೇ ಸಮನೆ ಕಷ್ಟಪಡುತ್ತಿದ್ದಾನೆ. ಅಂದರೆ ಅವನಿಗೆ ಪರತತ್ತ್ವದ ಪರೋಕ್ಷಜ್ಞಾನವಾಗಿದ್ದರೂ ಅವನಿಗೆ ಇನ್ನೂ ಅದರ ಬಗ್ಗೆ ಅಪರೋಕ್ಷ ಅನುಭವ ಹಾಗೂ ಅಪರೋಕ್ಷ ಜ್ಞಾನವು ಆಗಿಲ್ಲವೆಂದು ಅದನ್ನು ಪಡೆಯಲು ಹರಸಾಹಸ ಮಾಡುತ್ತಿದ್ದಾನೆ. ಇಂತಹ ಪರೋಕ್ಷಜ್ಞಾನವನ್ನು ಪಡೆದ ಮುಮುಕ್ಷುವೇ ಈ ಗ್ರಂಥವನ್ನು ಅರ್ಥ ಮಾಡಿಕೊಳ್ಳಲು ಮುಖ್ಯ ಅಧಿಕಾರಿಯಾಗಿರುತ್ತಾನೆ ಮತ್ತು ಅವನೇ ಅಪರೋಕ್ಷ ಅನುಭವವನ್ನು ಪಡೆದು ಬ್ರಹ್ಮಾತ್ಮೈಕ್ಯ ಜ್ಞಾನವನ್ನು ಪಡೆಯಲು ಅರ್ಹನಾಗುತ್ತಾನೆ. ಈ ಓವೀಯ ಕೊನೆಯ ಎರಡು ಚರಣಗಳನ್ನು ಮುಂದಿನ ಓವೀಗಳಲ್ಲಿ ತೆಗೆದುಕೊಳ್ಳಲಾಗಿದೆ.

**ಓ.ಸಂ.179** : ಸದ್ಗುರುವಿನ ಮೂಲಕ ಯಾರು ಈ "ಆತ್ಮಾನುಭವ" ಗ್ರಂಥವನ್ನು ಅರ್ಥಮಾಡಿಕೊಳ್ಳುತ್ತಾರೋ ಆ ಮುಮುಕ್ಷುವು ಸುಖ-ದುಃಖರಹಿತನಾಗಿ ಅಖಂಡಾನಂದ ಸ್ವರೂಪವೂ, ಚಿನ್ಮಾತ್ರ ಸ್ವರೂಪವೂ ಆದ ನಿತ್ಯ ಬ್ರಹ್ಮನೇ ತಾನಾಗುತ್ತಾನೆ ಎನ್ನುವುದು ನಿಶ್ಚಯ.

**ವಿವರಣೆ:** ಹಿಂದಿನ ಓವೀಯ ಕೊನೆಯ ಎರಡು ಚರಣಗಳನ್ನು ಈ ಓವೀಯಲ್ಲಿ ಸೇರಿಸಿಕೊಂಡು ಅರ್ಥೈಸಲಾಗಿದೆ. ಹಿಂದಿನ ಓವೀಯಲ್ಲಿ ಯಾರು ಅದ್ವಿತೀಯ ಬ್ರಹ್ಮನ ಬಗ್ಗೆ ಪರೋಕ್ಷಜ್ಞಾನವನ್ನು ಪಡೆದಿರುವರೋ ಅವರೇ ಈ "ಆತ್ಮಾನುಭವ" ಗ್ರಂಥವನ್ನು ಅರ್ಥಮಾಡಿಕೊಳ್ಳಲು ಅರ್ಹರಾಗಿರುತ್ತಾರೆ ಎಂದು ತಿಳಿಸಲಾಗಿದೆ. ಈ ಓವೀಯಲ್ಲಿ ಅಂತಹ ಬ್ರಹ್ಮನ ಪರೋಕ್ಷಜ್ಞಾನವನ್ನು ಪಡೆದ ಅಧಿಕಾರಿಯು ಈ ಗ್ರಂಥವನ್ನು ತನ್ನ ಸದ್ಗುರುಗಳ ಸಮ್ಮುಖದಲ್ಲಿ ಸರಿಯಾಗಿ ಅಂದರೆ ಯಥಾರ್ಥವಾಗಿ ಅರ್ಥ ಮಾಡಿಕೊಳ್ಳಬೇಕು. ಅಂತಹವನು ಲೌಕಿಕ ಸುಖ ದುಃಖಗಳನ್ನು ಮೀರಿ ಅಖಂಡಾನಂದವನ್ನು ಪಡೆಯುತ್ತಾನೆ. ಅಂದರೆ ಸನ್ಮಾತ್ರವೂ ( ನಿತ್ಯವೂ ) ಹಾಗೂ ಚಿನ್ ಮಾತ್ರವೂ ಆಗಿರುವ ಸ್ವತಃ ಬ್ರಹ್ಮ ಸ್ವರೂಪನೇ ತಾನಾಗುತ್ತಾನೆ. ಇದೇ ವಿಷಯವಾಗಿ ಮುಂದಿನ ಓವೀಯು ಮುಂದುವರೆಯುತ್ತದೆ.

**ಓ.ಸಂ.180** : ಪರೋಕ್ಷಜ್ಞಾನಿಯಾದ ಮುಮುಕ್ಷುವು ಹೀಗೆ ಪಡೆದ ಜ್ಞಾನದಿಂದ ತಾನೇ ಬ್ರಹ್ಮನಾಗುತ್ತಾನೆ. ಈ ವಿಷಯದಲ್ಲಿ ಇದರ ಬಗ್ಗೆ ಸಂಶಯವಿದ್ದವನು ಜನ್ಮ-ಮರಣಗಳ ವಿಷ ವೃತ್ತದಲ್ಲಿ ಸಿಕ್ಕು ದುಃಖವನ್ನು ಅನುಭವಿಸುತ್ತಾನೆ. ಇದು ನಿಶ್ಚಿತವಾಗಿ ನಿತ್ಯ ಸತ್ಯವಾಗಿರುತ್ತದೆ.

**ವಿವರಣೆ :** ಶ್ರೀ ಗುರು ಪದ್ಮನಾಭರು ತಮ್ಮ ಗ್ರಂಥವಾದ "ಆತ್ಮಾನುಭವ" ವನ್ನು ಪರೋಕ್ಷಜ್ಞಾನವಾದವನು ಸದ್ಗುರು ಮುಖದಿಂದ ಯಥಾರ್ಥವಾಗಿ ಅರ್ಥಮಾಡಿಕೊಂಡರೆ ಅವನಿಗೆ ಬ್ರಹ್ಮಾತ್ಮೈಕ್ಯ ಜ್ಞಾನವು ಲಭಿಸಿ ಈ ಭವರೋಗದಿಂದ ಪಾರಾಗಿ ಅಖಂಡಾನಂದ ಸಾಮ್ರಾಜ್ಯವನ್ನೇ ಗೆಲ್ಲುತ್ತಾನೆ ಎಂದು ಹಿಂದಿನ ಓವೀ.ಸಂ.179 ರಲ್ಲಿ ತಿಳಿಸಿದ್ದಾರೆ. ಹೀಗೆ ಜ್ಞಾನದಿಂದ ಸ್ವತಃ ತಾನೇ ಬ್ರಹ್ಮನಾಗುತ್ತಾನೆ ( ಬ್ರಹ್ಮವಿತ್ ಬ್ರಹ್ಮೈವ ಭವತಿ ). ಇದನ್ನು ನಂಬದೇ ಸಂಶಯಪಡುವವನು ಜನ್ಮ-ಮರಣ ವಿಷ ಚಕ್ರದಿಂದ ತಪ್ಪಿಸಿಕೊಳ್ಳಲಾರ. ಅವನು ಅನೇಕ ಕೀಳು ಯೋನಿಯಲ್ಲಿ ಹುಟ್ಟಿ ವಿವಿಧ ರೀತಿಯ ದುಃಖವನ್ನು ಅನುಭವಿಸಬೇಕಾಗುವುದು.

ಇದು ಪರಮ ನಿತ್ಯ ಸತ್ಯವಾಗಿದ್ದು ಇದನ್ನು ಶ್ರೀಗಳು ನಿಶ್ಚಿತವಾಗಿ 'ತ್ರಿವಾರ ಸತ್ಯ' ವೆಂದು ಹೇಳಿದ್ದಾರೆ. ಅಂದರೆ ಅದು 'ಸತ್ಯ- ಸತ್ಯ - ಸತ್ಯ' ವೆಂದು ಹೇಳಿದಂತಾಯಿತು.

**ಓ.ಸಂ.181** : ಈಗ ಶಿಷ್ಯನು, ನಿಷ್ಕಾಮ ಕರ್ಮಗಳು ಯಾವುವು ಎಂದು ಗುರುಗಳಿಗೆ ಪ್ರಶ್ನೆಯನ್ನು ಮಾಡುತ್ತಾನೆ. ಇದಕ್ಕೆ ಗುರುಗಳು ಅದು ಮುಂದಿನ ಅಧ್ಯಾಯದ ವಿಷಯವೆಂದು ಹೇಳುತ್ತಾರೆ.

**ವಿವರಣೆ** : ಬ್ರಹ್ಮ ಜಿಜ್ಞಾಸೆಗೆ ಅಥವಾ ವೇದಾಂತ ವಿಷಯದ ಕಲಿಕೆಗೆ ಅಧಿಕಾರಿಯಾಗಲು (ಅದನ್ನು ಪಡೆಯಲು ಬೇಕಾದ ಸಾಮರ್ಥ್ಯವನ್ನು ಗಳಿಸಲು) ಸಾಧನ-ಚತುಷ್ಟಯಗಳ ವಿವರಣೆಯನ್ನು ಈ ಅಧ್ಯಾಯದಲ್ಲಿ ಹೇಳಲಾಗಿದೆ.
ಸಾಧಕನಲ್ಲಿ ಈ ಸಾಧನಗಳು ಉದಯಿಸಬೇಕಾದರೆ ಅವುಗಳನ್ನು ದೀರ್ಘಕಾಲದವರೆಗೆ ನಿಷ್ಕಾಮ ಕರ್ಮ ಹಾಗೂ ಉಪಾಸನೆಯ ಮೂಲಕ ಅಥವಾ ಭಕ್ತಿಯ ಮೂಲಕ ಭಗವಂತನನ್ನು ಆರಾಧಿಸಬೇಕಾಗುತ್ತದೆ. ಅದಕ್ಕಾಗಿ ಕರ್ಮ ಹಾಗೂ ಭಕ್ತಿಯ ಬಗ್ಗೆ ವಿವರವಾಗಿ ಹೇಳಿರಿ ಎಂದು ಶಿಷ್ಯನು ಕೇಳಿದಾಗ ಅದು ಮುಂದಿನ ಅಧ್ಯಾಯದ ವಿಷಯವೆಂದು ಗುರುಗಳು ಶಿಷ್ಯನಿಗೆ ಹೇಳುತ್ತಾರೆ.

**ಓ.ಸಂ.182** : ಈಗಲೇ ಮುಂದಿನ ಅಧ್ಯಾಯದಲ್ಲಿ ಇರುವುದನ್ನೂ ಹೇಳಿದರೆ ಶಿಷ್ಯನಿಗೆ ಅದೆಲ್ಲವನ್ನೂ ಮನನ ಮಾಡಿಕೊಳ್ಳಲು ನೆನಪಿಗೆ ಬರಲಿಕ್ಕಿಲ್ಲ. ಆದುದರಿಂದ ಅವನು ಏಕಾಂತದಲ್ಲಿ ಅಧ್ಯಾಯದ ವಿಷಯವನ್ನು ಒಂದೊಂದಾಗಿ ಮನನ ಮಾಡಿಕೊಳ್ಳಬೇಕು.

**ವಿವರಣೆ** : ಈ ಅನುಭವ ಗ್ರಂಥವನ್ನು ಶ್ರೀಗಳು ಬರೆದು ಅದನ್ನು ಪ್ರವಚನದಲ್ಲಿ ಶಿಷ್ಯನಿಗೆ ಶ್ರವಣ ಮಾಡಿಸಿದಂತೆ ಬರೆದಿದ್ದಾರೆ. ಶಿಷ್ಯನ ನಿಮಿತ್ತದಿಂದ ಈ ಅಮೂಲ್ಯವಾದ ಆಧ್ಯಾತ್ಮಿಕ ಗ್ರಂಥವನ್ನು ತಮ್ಮ ಭಕ್ತರಿಗಾಗಿಯೇ ಬರೆದಿದ್ದಾರೆ. `ನಿಷ್ಕಾಮ ಕರ್ಮವನ್ನು ಕೂಡಾ ಹೇಳಿರಿ' ಎಂದು ಕೇಳುವ ಶಿಷ್ಯನಿಗೆ ಗುರುಗಳು, ಎಲ್ಲವನ್ನೂ ಒಮ್ಮೆಗೇ ಹೇಳಿದರೆ ಅದನ್ನು ಮನನ ಮಾಡುವಾಗ ಮರೆತು ಹೋಗಬಹುದು. ಆದುದರಿಂದ ಈ ಅಧ್ಯಾಯದ ವಿಷಯಗಳನ್ನಷ್ಟೇ ಏಕಾಂತದಲ್ಲಿ ಕುಳಿತು ಮನನವನ್ನು ಮಾಡು ಎಂದು ಹೇಳಿದ್ದಾರೆ. ಇದರಿಂದ ತಮ್ಮ ಭಕ್ತರೂ ಕೂಡ ಪ್ರತಿ ಅಧ್ಯಾಯದ ಪಠಣವನ್ನು ಒಂದೊಂದಾಗಿ ಮಾಡಿ ಅದರ ಯಥಾರ್ಥವನ್ನು

ತಿಳಿದುಕೊಂಡು ನಂತರ ಮನನದಲ್ಲಿ ಅದರ ಸಂಪೂರ್ಣ ಸ್ಮರಣೆಯನ್ನು ಮಾಡಬೇಕೆಂದು ಹೇಳಿದ್ದಾರೆ.

**ಓ.ಸಂ.183** : ಶಿಷ್ಯನ ಜಿಜ್ಞಾಸಾ ಬುದ್ಧಿಯನ್ನು ಕಂಡು ಗುರುಗಳಿಗೂ ಹೇಳುವ ಉತ್ಸಾಹ ಬಂದು ಶಿಷ್ಯನ ಸಂಶಯಾತ್ಮಕ ಪ್ರಶ್ನೆಗಳಿಗೆ ಮುಂದಿನ ಅಧ್ಯಾಯದಲ್ಲಿ ಉತ್ತರವನ್ನು ಕೊಟ್ಟು ನಿಶ್ಚಯವಾಗಿ ಸಂಶಯಗಳ ನಿರ್ಮೂಲನ ಮಾಡುವುದಾಗಿ ಹೇಳಿದ್ದಾರೆ.

**ವಿವರಣೆ :** ಗುರುಗಳು ಪ್ರವಚನ ಮಾಡುವಾಗ ಯಾವ ರೀತಿಯ ಪ್ರತಿಕ್ರಿಯೆಯನ್ನೂ ತೋರಿಸದ ಶಿಷ್ಯರಿಗಿಂತ ಆಗಾಗ ಅರ್ಥವಾಗದ ವಿಷಯಗಳು ಹಾಗೂ ಹೆಚ್ಚು ವಿವರಿಸದೇ ಇರುವ ವಿಷಯಗಳ ಬಗ್ಗೆ ಶಿಷ್ಯರು ಗುರುಗಳನ್ನು ಪ್ರಶ್ನಿಸಿದರೆ ಆಗ ಗುರುಗಳಿಗೆ ಪ್ರಸನ್ನತೆ ಉಂಟಾಗುತ್ತದೆ. ಈ ರೀತಿಯ ಜಿಜ್ಞಾಸು ಬುದ್ಧಿಯ ( ಪ್ರಶ್ನಿಸುವ ) ಶಿಷ್ಯರಿದ್ದರೆ ಗುರುಗಳು ಹೆಚ್ಚು ಉತ್ಸಾಹದಿಂದ ಹೇಳುತ್ತಾರೆ. ಹಾಗೆಯೇ ಇಲ್ಲೂ ಶಿಷ್ಯನು 'ನಿಷ್ಕಾಮ ಕರ್ಮಗಳು ಯಾವುವು' ಎಂದು ಕೇಳಿದ ಪ್ರಶ್ನೆಗೆ ಶಿಷ್ಯನಿಗಿಂತ ಹೆಚ್ಚು ಉತ್ಸಾಹದಿಂದ ಮುಂದಿನ ಅಧ್ಯಾಯದಲ್ಲಿ ಹೆಚ್ಚು ವ್ಯಾಪಕವಾದ ಉತ್ತರವನ್ನು ಗುರುಗಳು ಕೊಟ್ಟಿದ್ದಾರೆ. ಮುಂದಿನ ಎರಡು ಓವೀಗಳಲ್ಲಿ ಈ ಅಧ್ಯಾಯದ ಫಲ ಶ್ರುತಿಯನ್ನು ಹೇಳಿದ್ದಾರೆ.

**ಓ.ಸಂ.184** : ಈ ಅಧ್ಯಾಯದಲ್ಲಿ ವಿವೇಕಾದಿ ನಾಲ್ಕು ಸಾಧನಗಳನ್ನು ವಿಸ್ತಾರವಾಗಿ ವಿವರಿಸಲಾಗಿದೆ. ಯಾವುದೇ ವ್ಯಕ್ತಿಯು ಈ ಅಧ್ಯಾಯವನ್ನು ನಿಯಮದಿಂದ ಪಠಣ ಮಾಡಬಹುದಾಗಿದೆ.

**ವಿವರಣೆ :** ಈ ಅಧ್ಯಾಯದಲ್ಲಿ ಸಾಧನ ಚತುಷ್ಟಯಗಳನ್ನು ವಿವರಿಸಲಾಗಿದೆ. ಇವುಗಳು ಸಾಧಕನಲ್ಲಿ ಇರುವುದೆಂದರೆ ಅವನಲ್ಲಿ ಚಿತ್ತಶುದ್ಧಿಯು ಇದೆಯೆಂದೂ ಹಾಗೂ ಅವನಿಗೆ ಬ್ರಹ್ಮಜಿಜ್ಞಾಸೆಗೆ ( ಬ್ರಹ್ಮಜ್ಞಾನವನ್ನು ಪಡೆಯಲು ) ಅಧಿಕಾರವಿದೆಯೆಂದೂ ಅರ್ಥವಾಗುತ್ತದೆ. ಆದುದರಿಂದ ಈ ಅಧ್ಯಾಯಕ್ಕೆ 'ಅಧಿಕಾರೀ ಲಕ್ಷಣ' ವೆಂಬ ಅನ್ವರ್ಥಕ ಶೀರ್ಷಿಕೆಯನ್ನು ಶ್ರೀಗಳೇ ಕೊಟ್ಟಿರುತ್ತಾರೆ. ಈ ನಾಲ್ಕು ಸಾಧನಗಳು - 1) ವಿವೇಕ; 2) ವೈರಾಗ್ಯ; 3) ಶಮದಮಾದಿ ಷಟ್ಕ – i) ಶಮ, ii) ದಮ, iii) ತಿತಿಕ್ಷ, iv) ಉಪರತಿ, v) ಶ್ರದ್ಧೆ ಮತ್ತು vi) ಸಮಾಧಾನ; ಹಾಗೂ 4) ಮುಮುಕ್ಷುತ್ವ ಗಳಾಗಿದ್ದು, ಈ ಅಧ್ಯಾಯದಲ್ಲಿ ಇವುಗಳನ್ನು ಶ್ರೀಗಳು ವಿವರವಾಗಿ

ತಿಳಿಸಿದ್ದಾರೆ. ಈ ಅಧ್ಯಾಯವನ್ನು ದಿನನಿತ್ಯ ನಿಯಮಾನುಸಾರ ನಿಷ್ಠೆಯಿಂದ ಯಥಾರ್ಥಮಾಡಿಕೊಂಡು ಅದರ ಪಾರಾಯಣವನ್ನು ಅಮಲಾತ್ಮರು ಅಥವಾ ಪುಣ್ಯವಂತರು ( ಸತ್ಪುರುಷರು ) ಮಾಡಿದರೆ ಆಗ ಅವರಿಗೆ ಮುಂದಿನ ಓವೀಯಲ್ಲಿ ಹೇಳಿದ ಫಲವು ದೊರಕುವುದು. ಈ ಓವೀಯು ಮುಂದುವರೆದು ಮುಂದಿನ ಓವೀಯಲ್ಲಿ ಮುಕ್ತಾಯವಾಗಿ ಈ ಅಧ್ಯಾಯದ ಫಲ ಶ್ರುತಿಯನ್ನು ತಿಳಿಸಲು ಮೀಸಲಾಗಿದೆ.

<u>ಓ.ಸಂ.185</u> : ಈ ಎರಡನೆಯ ಅಧ್ಯಾಯವನ್ನು ಪ್ರತಿನಿತ್ಯ ನಿಷ್ಠೆಯಿಂದ ಪಾರಾಯಣ ಮಾಡುವವನು ಸಾಧನ ಚತುಷ್ಟಯ ಸಂಪನ್ನನಾಗುತ್ತಾನೆ. ನಂತರ ಅವನು ಗುರುಗಳ ಅನುಗ್ರಹದಿಂದ ಬ್ರಹ್ಮಜ್ಞಾನಹೊಂದಿ ಆನಂದಘನನಾದ ಬ್ರಹ್ಮನಲ್ಲಿ ಐಕ್ಯ ಹೊಂದುವನು.

<u>**ವಿವರಣೆ**</u> : ಸಾಧಕನು ಸುಲಭವಾಗಿ ಚಿತ್ತ ಶುದ್ಧಿಯನ್ನು ಹೊಂದುವ ( ಸಾಧನ ಚತುಷ್ಟಯ ಸಂಪನ್ನನಾಗಲು) ಮೂಲಕ ಜ್ಞಾನ ಸಂಪಾದನಾ ಯೋಗ್ಯತೆಯನ್ನು ಪಡೆಯುವ ಮಾರ್ಗವೊಂದನ್ನು ಹಿಂದಿನ ಓವೀ ಹಾಗೂ ಈ ಓವೀಗಳು ನಮಗೆ ತಿಳಿಸುತ್ತವೆ. ಈ ಅಧ್ಯಾಯವನ್ನು ಅತ್ಯಂತ ನಿಷ್ಠೆಯಿಂದ ನಿಯಮಕ್ಕೆ ಬದ್ಧನಾಗಿ ಪ್ರತಿ ನಿತ್ಯವೂ ಅರ್ಥಸಹಿತ ಪಠಣ ಮಾಡಿದರೆ ಆಗ ಅದುವೇ ನಿಷ್ಕಾಮ ಕರ್ಮವೂ ಹಾಗೂ ಉಪಾಸನೆಯೂ ಮಾಡಿದಂತೆಯೇ ಆಗುತ್ತದೆ. ಆದುದರಿಂದ ವಿವೇಕಾದಿ ಸಾಧನ ಚತುಷ್ಟಯಗಳು ಒಂದೊಂದಾಗಿ ಅವನಲ್ಲಿ ಪ್ರಕಟವಾಗುತ್ತವೆ. ಇದರಿಂದ ಸಾಧಕನಿಗೆ ಚಿತ್ತಶುದ್ಧಿಯು ಉಂಟಾಗಿ ಗುರುಮುಖೇನ ಶ್ರವಣ-ಮನನ-ನಿದಿಧ್ಯಾಸನಗಳಿಂದಲೂ ಹಾಗೂ ಗುರುಪ್ರಸಾದದಿಂದಲೂ ಬ್ರಹ್ಮಜ್ಞಾನವನ್ನು ಪಡೆದು ಪರಮಾನಂದ ಸ್ವರೂಪದ ಬ್ರಹ್ಮವೇ ತಾನಾಗುವನು.

<u>ಓ.ಸಂ.186</u> : ಇಲ್ಲಿಗೆ ಶ್ರೀ ಪದ್ಮನಾಭ ಯತೀಂದ್ರರು ರಚಿಸಿದ "ಆತ್ಮಾನುಭವ" ಎಂಬ ಗ್ರಂಥದಲ್ಲಿ 'ಅಧಿಕಾರೀ ಲಕ್ಷಣ' ವೆಂಬ ದ್ವಿತೀಯೋಧ್ಯಾಯವು ಸಮಾಪ್ತವಾಗುತ್ತದೆ.

<u>**ವಿವರಣೆ**</u> : ಪ್ರತಿ ಅಧ್ಯಾಯದ ಕೊನೆಯ ಓವೀಯಲ್ಲಿರುವಂತೆ ಈ ಅಧ್ಯಾಯದ ಕೊನೆಯ ಓವೀಯಲ್ಲಿ ಈ ಗ್ರಂಥದ ಹೆಸರು, ಗ್ರಂಥವನ್ನು ರಚಿಸಿದವರ ಹೆಸರು, ಅಧ್ಯಾಯದ ಹೆಸರುಗಳನ್ನು ಬರೆಯುವುದಲ್ಲದೇ ಅಲ್ಲಿಯವರೆಗೆ ಗ್ರಂಥದಲ್ಲಿ ಬರೆದಿರುವ ಒಟ್ಟು ಓವೀಗಳ ಸಂಖ್ಯೆಯನ್ನೂ ಬರೆದಿದ್ದಾರೆ. ಅಲ್ಲದೇ ಕೊನೆಯ ವಾಕ್ಯವು ಸಂಸ್ಕೃತದಲ್ಲಿದ್ದು ಮೇಲಿನ

ಸಂಗತಿಗಳನ್ನು ಪುನಃ ಬರೆದಿದ್ದಾರೆ. ಈ ಪ್ರಕಾರ ಶ್ರೀ ಪದ್ಮನಾಭ ಯತೀಂದ್ರರು "ಆತ್ಮಾನುಭವ" ಎಂಬ ಗ್ರಂಥದಲ್ಲಿ 'ಅಧಿಕಾರೀ ಲಕ್ಷಣ' ವೆಂಬ ಎರಡನೆಯ ಅಧ್ಯಾಯವು ಸಮಾಪ್ತವಾಗಿರುತ್ತದೆ' ಎಂದು ಬರೆದಿದ್ದಾರೆ. ಒಂದು ಮತ್ತು ಎರಡನೆಯ ಅಧ್ಯಾಯದಲ್ಲಿರುವ ಒಟ್ಟು ಓವೀಗಳ ಸಂ.273 ( 87 + 186 ). ಈ ಚಾರಿತ್ರಿಕ ಮಾಹಿತಿಗಳನ್ನು ಕೊಡುವುದರ ಮಹತ್ವವನ್ನು ಶ್ರೀಗಳು ಅವರ ಕಾಲದಲ್ಲೇ ತಿಳಿದಿದ್ದರು ಎಂದು ತಿಳಿಯುತ್ತದೆ.

ಇತಿ ಶ್ರೀಮತ್ಪರಮಹಂಸೇತ್ಯಾದಿ ಶ್ರೀಪದ್ಮನಾಭತೀರ್ಥಕೃತಾವಾತ್ಮಾನುಭವೇ

ದ್ವಿತೀಯೋऽಧ್ಯಾಯಃ ಸಮಾಪ್ತ.

ಹರಿಃ ಓಂ